**ಕೊಯ್ಲೆವಿಂಡ**, ಕೊಯಿಲೆಮಿಂಡ (ನಾ). ಬೆಡಗಿನ ಮಿಂಡ (?): ಪುದಿದ ಚತುರಂಗದತ್ತ ಚದುರಂ ಪೊದೆಯಿಸುತೆ ಕೊಯ್ಲೆ [ಪಾಠಾಂ. ಯ್ಲೆ]ವಿಂಡರಂ ಪಣೆದದಿಂ ಮಣಿಯಿಸುತ್ತೆ . . . ಬಿನದಿಸುತ್ತಿಸೆದುದಬಲಾಜನಂ (ಪದ್ಮರಾ. ೮-೮೮). **ಕೊಯಿಲೆಮಿಂಡ**: ಲೇಸು ಮಾಡಿದ ಕೊಯಿಲೆಮಿಂಡರ ರತಿಸುಖಕಾಸೆಮಾಡದೆ ಮನದೊಳಗೆ (ಕುಠಾಸಾಂ. ೩೧-೨೪); "ತುಂಟ ವಿಟಪುರುಷ" (ಪ್ರಭಣ್ಣ). [ಕೊಯ್ಲೆ + ಮಿಂಡ]

**ಕೊಯ್ತು** (ನಾ). ಕೊಯ್ತ; ಕಡಿತ (?): ಅಡಸುವ ಕುತ್ತವೊತ್ತರಿಪ ಮಿತ್ತು ಕಡಂಗುವ ಮಾರಿ ಕೊಯ್ತುನಿಂ ತೊಡರ್ವ ವಿರೋಧಿ ಪಾಯ್ವ ಪುಲಿ ಪೊಯ್ವ ಸಿಡಿಲ್ . . . ಕಡೆಗಣ್ಣುವುದೆಂದೊಡೆ ತೇರಿದಾಳದೇ ಕಡುಗಲಿ ಗೊಂಕ ಭೂಪತಿಯ ಭವ್ಯತೆ ಕೇವಳಮೇ ನಿರೀಕ್ಷಿಸಲ್ (ಇಳ. XIV, ೧೫; 1123; ಶಾಸಮಂ. ೩೩೯). [ಕೊಯ್ + -ತು]

**ಕೊಯ್ಸು**, ಕುಯಿಸು, ಕುಯ್ಯಿಸು, ಕೊಯಿಸು, ಕೊಯ್ಯಿಸು (ಕ್ರಿ). ಕೊಯ್ಯುವಂತೆಮಾಡು; ಕತ್ತರಿಸು; ಕಟಾವುಮಾಡಿಸು: ನಿನ್ನ ಪಧುಗಳ ತುಟಿಬ ಕೊಯ್ಸುವೆನವರ ಕೊತ್ತಿರ ಮಾಡುವೆನು ತನಗೆ (ಕುವ್ಯಾ. ೫-೨೨); ಕೆಳದಿಯರ ಕೈಯಿಂದ ಕೊಯ್ಸಿದಳುಳಿದ ಕೌರವ ನನುಜವರ್ಗದ ಬಲುಹುರಿಯ ನೇಣುಗಳನು (ಕುವ್ಯಾ. ೨೧-೬). **ಕುಯಿಸು**: ರಾಜಸಭೆಯಲ್ಲದೆ ಮತ್ತೊಂದು ಕಡೆಯಲ್ಲಾದರೆ ನಿನ್ನ ನಾಲಗೆಯಂ ಕುಯಿಸಿ ಕಳುಹಿಸಿರುವೆನು (ಸೌಗಂಧಿ. ೨೪೪-೧೩); ತಿಮ್ಮನಾಯಕನು . . . ತಮ್ಮನ ಕಿವಿಮೂಗುಗಳನ್ನು ಕುಯಿಸಿದನು (ಇತಿಹಾಂ. XI, ೬). **ಕುಯ್ಯಿಸು**: ಕುರಿಕೋಳಿ ಕುಯ್ಯಿಸಿ ತಿಂದು ಮಾರ್ಜಾಲನ್ಯಾಯ ಮಾಡಿ ಹೋಗುತ್ತಾರೆ (ನನ್ನೂರು. ೩೦). **ಕೊಯಿಸು**: ಕೊಯ್ ಕೊಯ್ ಎಂದು ಕೊಯಿಸಿದರ್ (ಛಾಶಾಭೂ. ೨೧೬ ಉದಾ); ಕೆರದ ಅಳತೆಗೆ ಕಾಲ ಕೊಯಿಸಿದ ಹಾಗೆ (ಗಾದೆ). **ಕೊಯ್ಯಿಸು**: ಮರ ಕೊಯ್ಯಿಸಬೇಕು (ರೂಢಿ).

ಕೊಯ್ಸಿಕೊಳ್ = ಕತ್ತರಿಸಿಕೊಳ್ಳು: ಇನ್ನುಳಿದ ಮೂಗಂ ಕೊಯ್ಸಿಕೊಳಲೆಂದೀಗ ಬಂದೆಯಲ (ಬಸಪು. ೫೦-೨೪). [ಕೊಯ್ + -ಸು]

**ಕೊರ್$_1$** (ನಾ). ಒಂದು ಅನುಕರಣ ಶಬ್ದ; ಗಂಟಲಿನಿಂದ ಹೊರಡುವ ಒಂದು ಬಗೆಯ ಧ್ವನಿ.

**ಕೊರ್$_2$** (ನಾ). ಒಂದು ಜಾತಿಯ ಸಸ್ಯ: ಕೊಕ . . . ಲಿಂಬಾರ (ವೈಔನಿ. ೯೩-೮೯೬). [?]

**ಕೊರಂಗಲ** (ನಾ). ಒಂದು ಜಾತಿಯ ಸಸ್ಯ: ಅವರ ಇವರ ಹಾಂಗೆ ನಾವು ಮದ್ಲೆ ತೆಪ್ಪೆ, ಕಾರೆಜಕ್ಕೆ ಕೊರಂಗಲ ತೆಪ್ಪೆ, ಸುಡುಗಾಡ್ ಸುಂಟಿ ಕೊಂಬು, ಅಮ್ಲು ಬರೂಕೆ ಅಂತ ಹಾಕೂದಿಲ್ಲ (ಹಂಜಪಾಂ. ೫೪). [?]

**ಕೊರಂಗಿ** 'ಕುರಂಗು' ನೋ.

**ಕೊರಂಗು**, ಕೊರಗು$_1$ (ಕ್ರಿ). ೧. ಸವೆ; ಸೊರಗು; ಬಡವಾಗು; ಕ್ಷೀಣವಾಗು: ತಿರಿಪಲೊಡಂ ತ್ರಿಖಂಡ ಧರಣೀಪತಿ ಚಕ್ರದ ಧೀಪ್ತ ರಶ್ಮಿಯಿಂ . . . ಯಾದವರ ಸೇನೆ ಕರಿಂಕಜೆಯಟ್ಟೆ ಕಾನನಂ ಕೊಕ್ಕಿಗು ವವೊಲ್ ಕೊರಂಗಿದುದು (ಮಹಾಸೇ. ೧೩-೭೯). ೨. ಕಳವಳಿಸು; ಪರಿತಪಿಸು; ವ್ಯಥೆಪಡು: ಅಂತಸ್ತಾಪದೆ ಕರಂ ಕೊರಂಗಿ . . . ರೂಪ ಶೃಂಖಲೆಯಾದಂ (ದಶಕು. ೬-೯೧). **ಕೊರಗು$_1$**: ೧. ಕಂದದು ಕುಂದದು ಕರಗದು ಕೊರಗದು ಎನ್ನ ನಿರ್ಭಾವಾರ್ಜನೆ (ಆದವ. ೫೧-೧೫೧); ಕೊರಗಿರ್ದಿನಿಯಳ ನಮರ್ದಪ್ಪಿಕೊಳುತಂ (ಕುಸುಮಾ. ೧೧-೧೧೪); ಕೊರಗುತಲಿರುವ ಪ್ರಾಣಗಳೊಡನೆ ಕೂಡಿರುವ ಶತ್ರುಗಳನ್ನು ಖಂಡಿಸುತ್ತ (ಕೃಪಾಕ. ೨೫). ೨. ಮಾದ್ರಿ ತನಗೆ ಮಕ್ಕಳಿಲ್ಲದುದರ್ಕೆ . . . ಕರಂ ಕೊರಗಿ (ಪಂಪಭಾ. ೨-೨ ವ); ಬಂದಹನೆಂದು ಬಟ್ಟೆಯ ನೋಡಿ ಬಾರದಿರ್ದೊಡೆ ಕರಗಿ ಕೊರಗಿದೆನವ್ವಾ (ಮಹಾದೇ. ೩೫-೧೦); ಮುಂದುಗೆಟ್ಟು ಕೊರಗುವ ಸೌಂದರವತಿಯುಂ ಕಂಡು (ಉದ್ಭಟ. ೬-೩೩ ವ); ಭಕ್ತನಿರವಂ ನೋಡಿ ಕರಗಿ (ಬಸರ. ೪-೪೫). ೩. ಬಾಡು; ಬತ್ತು; ಒಣಗು; ಕಂದು: "ಕೊರಗು-ರಸವಿಹೀನೇ (ನಿಸ್ಸಾರವಾಗು)" (ಶಮುಧಾ); ವಿರಹಾನಳನಿಂ ಬೆಂದು ಕರಗಿ ಕೊರಗಿ (ವಡ್ಡಾರಾ. ೩೦-೧೬); ಸರೋಜಿನೀ ವನಮಾದಂ ಕೊರಗುತ್ತೆ ಮುಗಿಗುಂ (ಕವಿರಾ. ೩-೩೧); ಸುಯ್ಯ ಬೆಂಕೆಗಳೊಳ್ ಪೊಕ್ಕೆ ನಂಜನವನಂ ಕೊರಗಿರ್ಪವು (ಶಾಂತಿಪು. ೮-೯೫); ಮುಯ್ಯ ತಾಪದಿಂ ಕುರವಕಮೆಯ್ದೆ ಸೀದಪುದಿದೆಂದು ಕರಂ ತಿಳಕಾವನೀಜಮಂ ಕೊರಗುಗು ಮೆಂದು (ಅರ್ಧನೇ. ೩-೧೦೮); ಉರಿಗದಿರಿಂದ ಕಿಮುಳ್ಳಿದ ತಳಿರನೆ ಕೊರಗಿ (ಜಯುಕಾ. ೪-೯೫). [ದೇ. ಗಿ ತಮಿ. ಕುರೆಜ್ಞು]

**ಕೊರಂಟು**, ಕೊರಟು (ನಾ). ೧. ಒಣಗಿದ ಮರ; ಕೊರಡು: ಅಲ್ಲಿದಪಿಲ್ಲಿದಂ ಶಿವನೆನುತ್ತಡೆಯಾಡಲದೇಕೆ . . . ನಟ್ಟ ಕಲ್ಲಲ್ಲಿ ಪೊದಲ್ದ ಪುತ್ತದೆಡೆಯಲ್ಲಿ ಕಳಲ್ದ ಕೊರಂಟಿನಲ್ಲಿ ನೀನಲ್ಲದೆ ಮತ್ತೆ ಬೇರಿದುದನಿತ್ತಪರಾರ್ (ಶಂಕರ. ೮೬); ಕೊರಂಟಿನ ಬಿಲ್ವದಳಂಗಳಂ ಪ್ರಸೂತಿ ರಹಿತ ಗೋಪಯೋರಸಮನೀಯಭವಾರ್ಚನೆಗೆಂದನಾ ಚರಂ (ವೃಷವಿ. ೬-೨೩); ಕಟುವಿಲ್ಲದ ಪಶು ಪಾಲಂ ಕಜಿದುದಳುಂಬಂ ಕೊರಂಟು ಬಿಲ್ವದಳಂಗಳ್ ತುಟುಗೆ ಚಿಗುರ್ತುರ್ದು (ವೃಷವಿ. ೬-೨೪). **ಕೊರಟು**: ೨. ಒಣಗಿ ಉರುಟಾದುದು; ಕರಟಾದುದು: ಕೊರಟಾದುಂಗೇಕದೊಳಿರ್ದ ಪೀನ್ಗಳಂ (ನೇಮಿಪು. ೬-೧೧೨); ಉರಿವ ಬೆಂಕಿಗೆ ತಂಪು ತುಪ್ಪ ತಿಲ ಮೊದಲಾದ ಕುಲವಂ ಹಾಕಿ, ಅನಲನ ಕೆಡಿಸಿಹೆನೆಂಬ ಕಲಿಕೆಯ ಮಾತಿನ ನೆರೆ ಬಾಲಕರ ಕಂಡು ಇವರಿಗೆ ಅರಿಕೆ, ಎನಗದು ಕೊರಟನಿರಿಸಿದಂತೆ (ಮೋಳಿಮಾ. ೫೬-೨೩೯); ಆ ವನವು ಆನೆಯ ಮದೋದಕದಿಂದ ಬೆಳೆದು ತಾಳಲಾಟದಿಂದ ಸೊಪ್ಪು ಸೊಪ್ಪಾಗಿ ಮಷ್ತ್ರದಿಂದ ಕೊರಟಾಗಿ (ಸಾಹಿಸಂ. ೩೩). 'ಕೊಲಿಂಡು' ಪಠಾ.

ಕೊರಟುಬೀಳು = ಬೆಳವಣಿಗೆ ನಿಂತುಹೋಗು: (ಂ). [?]

**ಕೊರಂಟುದಲೆ**, ಕೊರಟುತಲೆ, ಕೊರಟುದಲೆ (ನಾ). ಕರಟಾದ ತಲೆ; ಒಣಗಿ ಜಡೆಗಟ್ಟಿ ಕೊರಡಿನಂತಾದ ತಲೆ: ಕುಳಿಗಣ್ ಕುಗ್ಗಿದ ನಾಸಿಕಂ ಬಿರೆಕೆವಲ್ . . . ಪಿಳಿಗಿರ್ದಂಘ್ರಿತಲಂ ಕೊರಂಟುದಲೆ (ಮಹಾಸೇ. ೩-೧೫೩). **ಕೊರಟುತಲೆ**: ಕೊರಟುತಲೆ ಹೊರಹಲ್ಲು ಕೆಂಪು (ಕಂಠೀ. ೨೦-೨). **ಕೊರಟುದಲೆ**: ಕೊರಟುದಲೆಯ ಕೊಳೆನಾಜುವ ಕಬ್ಬಾಯ ಸುರುಟುಕಿವಿಯ ಸುಂಠಿವೆರಲ (ನೇಮಿಸಂ. ೬-೧೦೩). [ಕೊರಂಟು + ತಲೆ$_1$]

**ಕೊರಂತಿ** (ನಾ). ಒಬ್ಬಾತನ ಹೆಸರು: ನಿನ್ನಿಯ ಕೊರನ್ತಿಯರಸರ ಮಕ್ಕಳ್ನಾಲ್ವರ್ ನೆಲದ ಬಾ ದಿ ಸೊಳ್ಕಾದಿ (ಎಕ. IV, ಹೆಗ್ಗಡ. ೧೧೬-೯; 930). [?]

**ಕೊರಂಬೆ** (ನಾ). ಮರದ ಎಲೆಗಳಿಂದ ಮಾಡಿದ ಗೊರಗು: ನೆತ್ತಿಯ ಮೇಲೆ ಕೊರಂಬೆ ಕೊಡೆಯನ್ನೇರಿಸುತ್ತಾ ಮಡದಿಗೆ ಉಸುರಿದ (ನಡೆದಾ. II, ೧೧೨೩). [← ತುಳು. ಕೊರಂಬು]

**ಕೊರಕ$_1$** (ನಾ). ೧. ಕೊರೆಯುವವನು; ರೇಖಿಸುವವನು: ಚುಕ್ಕಿ ಕೊರಕ, ಚಿತ್ರಕ (Stippler. ಇಂಕನಿ). ೨. ಕೊರೆಯುವ ಸಾಧನ: ಮೇವುಕೊರಕವನ್ನು ತೆಗೆದುಕೊಂಡು ಮೇವು ಕೊರೆಯ ಹತ್ತಿದನು (ಬಾಬಲ. ೭೭). [< ಕೊರೆ$^{1}$ + -ಕ$_3$]

**ಕೊರಕ್ಕೆ** (ನಾ). ಒರಟಾದದು; ಒರಟು: ದಿವ್ಯವಸನವ ಮುರುಕ ದಿಂದುಡುವಂಗದೊಳು ಕೊರಕದ ನಾರಿನ ಸೀರೆಯನುಡುವುದು ದೊರಕಿತೇ ನಿಮಗೆಂದಳುವರು (ಜ್ಞಾನಪ. ೯೩-೯೫). [?]

**ಕೊರಕಂಟಿ** (ನಾ). ಬೇಲಿಗಳಲ್ಲಿ ಬೆಳೆಯುವ ಒಂದು ಜಾತಿಯ ಹಂಬು, —ಬಳ್ಳಿ ; ಕೊರಕಂಟಿಬಳ್ಳಿ : (೬). [?]

**ಕೊರಕಂಟೆ** (ನಾ). ಕ್ರೌಂಚಪಕ್ಷಿ : (೬). [< ಸಂ. ಕ್ರೌಂಚ]

**ಕೊರಕಲ್**, ಕೊರಕಲ, ಕೊರಕಲು (ನಾ). ಪ್ರವಾಹ, ಬಂಡಿಯ ಗಾಲಿ ಮೊದಲಾದುವುಗಳಿಂದ ಕೊರೆದು, ಹರಿಗಡಿದ ಭೂಮಿ, —ತಗ್ಗು : "ಗುಂಡಾರ - ಕೊರಕಲ್" (ಕಾಕಶ್ಯ. ೨೬). **ಕೊರಕಲ** : (೬). **ಕೊರಕಲು** : ತಂಕ ನಡದು ಹೊಲದ ಕೊರಕಲಿಗೆ ಮೂತಿ ತಿಟ್ಟನಲ್ಲಿ ಪಡುವ ಮುಖವಾಗಿ (ಎಕ. III, ತಿರುಮ. ೬೩–೨೮೪ ; 1784) ; ಹಳ್ಳ ತಿಟ್ಟು ಕೊರಕಲುಗಳಿಂ ಕೂಡಿದ ಪರ್ವತಪ್ರಾಂತ (ಮುಪ್ರಾಮಂ. ೮೭). [?]

**ಕೊರಕಲ** 'ಕೊರಕಲ್' ನೋ.

**ಕೊರಕಲು** 'ಕೊರಕಲ್' ನೋ.

**ಕೊರಕಲ್ಲು** (ನಾ). ಕೊರೆಯುವ ಕಲ್ಲು ; ಬಿರುಸಾದ, ಮೊನೆಯಾದ, ಏಣುಗಳುಳ್ಳ ಕಲ್ಲು : (೬). [< ಕೊಱ$_1$ + ಕಲ್ಲು (< ಕಲ್$_3$)]

**ಕೊರಕಾಪುಳಿ** (ನಾ). ಒಂದು ಜಾತಿಯ ಗಿಡ : ಸೀಮೆ ಹುಣಸೆ, ಕೊರಕಾಪುಳಿ, ಕೊಟ್ಟಾಂಪುಳಿ (ಮೈಔಗಿ. ೬೨–೧೨೬೩). [?]

**ಕೊರಕು** 'ಕುರುಂಕು' ನೋ.

**ಕೊರಕೆ** (ನಾ). ಒಂದು ಜಾತಿಯ ಸಸ್ಯ : ಕೊರಕೆ ಸೊಪ್ಪಿನರಸ, ಬೆಲ್ಲವತ್ತದ ಸೊಪ್ಪಿನ ರಸ . . . ಈ ೬೨ ಬಗೆಯ ಸ್ವರಸಂಗಳಂ ಪ್ರತ್ಯೇಕ ಒಂದು ಮಾನವ ಹಣಿಸಿ (ಸಕವೈ. ೨೧೭). [?]

**ಕೊರಕೊಂಚಿ** (ನಾ). ಒಂದು ಬಗೆಯ ಪಕ್ಷಿ : "ಕುಲಿಗಾಯಿ ತಿನ್ನುವ ಹಕ್ಕಿ" (ಜಾನಕೋ. ೪೨). [?]

**ಕೊರಕೊರೆ** (ನಾ). ಒಂದು ಪ್ರದೇಶದ ಹೆಸರು (?) : ಅಕ್ಕೆಟನ್ನು ತಾಯೂರ ಪಡುವಣ ದೆಸೆಯ ಕೊರಕೊರೆಯ ಪಳ್ಳ (ಎಕ. III, ನಂಜನ. ೧೩೯–೧೨ ; 915). [?]

**ಕೊರಕೊಳ್ಳಿ** (ನಾ). ಉರಿ ಆರುತ್ತಿರುವ ಕೊಳ್ಳಿ : (೬). [< ಕೊಱ$_3$ + ಕೊಳ್ಳಿ$_1$]

**ಕೊರಕೋಡು** (ನಾ). ಒಂದು ಊರಿನ ಹೆಸರು : ಕೊರಕೋಡ ಕೊಣ್ಣನ್ದರ ಕೆಱೆ ಧಾತು ಸರ್ವ್ವಂಯುತ್ತರ್ (ಎಕ. VIII, ಸೊರಬ. ೧–೪ ; 797 ?). [?]

**ಕೊರಗ** (ನಾ). ೧. (ಕರಾ) ಹೊಲೆಯರಲ್ಲಿ ಒಂದು ಪಂಗಡ : ಮೊನ್ನೆ ತನಕ ನಾವು ಹೊಲೆಯ ಕೊರಗರೆಂದು ಕರೆಯುತ್ತಿದ್ದ ಹರಿಜನದ ಹಿರಿಯರು ಇಲ್ಲಿಯ ಮೂಲನಿವಾಸಿಗಳು (ತುಳುನಾ. ೫೪) ; ಮಾರಿ ಕೊರಗ ಎಂದು ಹಲವಾರು ಒಳಪಂಗಡಗಳ ಹೊಲೆಯರು ಬೆಂಗಳೂರಲ್ಲಿ ಇದ್ದಾರೆ (ದಂಬನಾ. ೧೯) ; ಅದಕ್ಕೆ ನಮ್ಮ ನೀರಿನ ಋಣ ಮುಗಿಯಿತು ಸತ್ತಿತು ಅದು . . . ಕೊರಗರನ್ನು ಬರಲಿಕ್ಕೆ ಹೇಳುತ್ತೇನೆ ಎಂದು ಅವಸರದಿಂದ ಕೊರಗರ ಕೊಪ್ಪಕ್ಕೆ ಹೋದಳು (ಮರಮ. ೪೫). ೨. ಓಲಗ ಬಾರಿಸುವವನು ; ವಾದ್ಯಗಾರ. ೩. ಬುಟ್ಟಿ, ಚಾಪೆ ಮೊದಲಾದುವುಗಳನ್ನು ಹೆಣೆಯುವವನು ; ಮೇದ. [← ತುಳು. ಕೊರಗ]

**ಕೊರಗಣೆ** (ನಾ). ಕೊರಗುವಿಕೆ ; ಚಿಂತೆ ; ಕಳವಳ : ಉಕ್ಕುವತಿ ದುಗುಡದಲಿ ಕರೆಸುತ್ತೊಕ್ಕಣಿಸಿದನು ಗುರು ವಸಿಷ್ಠನೊಳಕ್ಕುವೀ ಕೊರಗಣೆಗೆ ಪರಿಹಾರವನು ಬೆಸಸೆಂದು (ರಾಮಸಾಸಂ. ೧–೨–೩) ; ಮಗಳ ಮದ್ವೇದೊಂದೆ ಕೊರಗಣೆ ಹಿಡಿದು ಬಿಟ್ಟಿದೆ ಅವಳಿಗೆ (ಸರ್ವಮಂ. ೧೭೧). [ಕೊರಗು$_1$ (< ಕೊರಂಗು) + –ಅಣೆ$_4$]

**ಕೊರಗತಿ** (ನಾ). ಕೊರಗರ ಹೆಂಗಸು : ಮೂವರು ಕೊರಗರು, ಒಬ್ಬಳು ಕೊರಗತಿಯೂ ಬಂದರು (ಮರಮ. ೪೫). [ಕೊರಗ + –ತಿ$_1$ (< –ಇತ್ತಿ)]

**ಕೊರಗಿಲು** (ನಾ). ಒಂದು ಬಗೆಯ ಮರ : "ಪಿಚ್ಚಿಲೆ - ರಾಜಾಪ್ತ, ತ್ರಿಶೂಲಿ, ಎಲವ, ಕೊರಗಿಲು, ಲಪಂಗ" (ಒಷಧಿ. ೯೭). [?]

**ಕೊರಗಿಸು** (ಕ್ರಿ). ೧. ಕುಗ್ಗಿಸು ; ಸೊರಗಿಸು ; ಬಡವಾಗಿಸು : ನಿನ್ನ ತನುವಂ ಕೊರಗಿಪುದೆ ಲತಾಂಗಿ ಘೋರತರ ತಪದಿಂದಂ (ಕಾದಂಊ. ೫೫೧). ೨. ಬಾಡಿಸು ; ಬತ್ತಿಸು ; ಕಂದಿಸು : ನಿನ್ನ ಮೆಯ್ವಂಕೆಯಿಂದೆಮಗಾ ಹಾರಮಪ್ಪಲ್ಲಿಯ ಮೃಣಾಳಂಗಳೆಲ್ಲಮಂ ಕೊರಗಿಸದಿರ್ (ಕಾದಂಊ. ೩೩೪) ; ತರಂಗಾಳಿಯುಂ ನಂಜಿನ ಗಾಳಿಯೆನಿಸಿ ವನಕುಸುಮ ಕಿಸಲಯ ಪ್ರಕರಮುಂ ಕೊರಗಿಸಿದಪುದು (ವರ್ಧಪು. ೪–೫೮) ; ಇದು ದುಷ್ಕರ್ಮಾಬ್ಜ ಷಂಡಂಗಳನುಱೆ ಕೊರಗಿಪ್ಪೊಂದು ನೀಹಾರಮೆಂಬಂದದೆ ಹೋಮಸ್ತೋಮಧೂಮಂ ನೆಗೆದುದು (ಗಿರಿಕ. ೧–೬೭). ೩. ಸೋಲಿಸು ; ಮೀರು : ಸೈದಿಲನೆಯ್ದೆ ಕಣ್ಮಲರ್ ಕೊರಗಿಸೆ (ಕಬ್ಬಿಕಾ. ೨೩). [ಕೊರಗು$_1$ (< ಕೊರಂಗು) + –ಇಸು$_3$]

**ಕೊರಗು$_1$** 'ಕೊರಂಗು' ನೋ.

**ಕೊರಗು$_2$** (ನಾ). ಕಳವಳ ; ವ್ಯಥೆ ; ಚಿಂತೆ : ಅವನಿಗೆ . . . ತುಂಬ ಕೊರಗುಂಟಾಯಿತು (ವಚಭಾ. ೨೮೪) ; ನನ್ನ ಹೃದಯದಲ್ಲೂ ಕೊರಗು ಇತ್ತು (ರಾಹುಕ. ೨೭) ; ಅದೇ ಕೊರಗಿನಲ್ಲಿ ಆ ಸಾಧ್ವಿ ಆ ಮರುವರ್ಷವೇ ಗತಿಸಿದ್ದಳು (ಹೊಸಕ್ಷಿ. ೨೭). [< ಕೊರಂಗು]

**ಕೊರಗು$_3$** (ನಾ). ಒಂದು ಬಗೆಯ ವಾದ್ಯ (?) : ಮುರಳಿಯ ತಿವಳಿಯ ತಿಸರಿಯ ಕರಡೆಯ ಮದ್ದಳೆಯ ಕೊಂಬಲ ಪಳವದ ಪಲವುಂ ಗಿರುಗಟಿಯ ಸಿವುರ ಸಿಪ್ಪಿನ ಕೊರಗಿನ ಕಿನ್ನರದ ಸರಮೆ ಸರಮಾ ಪೊಂಬಲೊಳ್ (ಸೂಕ್ತಿಸು. ೪–೧೦೪). [?]

**ಕೊರಗುಟ್ಟು** (ಕ್ರಿ). ಕೊರಕೊರ ಶಬ್ದಮಾಡು : ಆ ಮರಿನಾಯಿ ಇನ್ನೂ ಹೆಚ್ಚಾಗಿ ಕೊರಗುಟ್ಟುತ್ತಾ ಹೊರಟಿತು (ಪಶಾಕ್ಷಿ. ೧೦೨). [ಕೊರ್$_1$ + ಕುಟ್ಟು$_1$]

**ಕೊರಚ** (ನಾ). ಬಾಚಣಿಗೆ ಮೊದಲಾದ ಸಾಮಾನುಗಳನ್ನು ಮಾರುತ್ತಾ ಊರೂರು ಅಲೆಯುವ ಗುಡ್ಡಗಾಡು ಜನ : ಕೊರಚರು – ಇವರಲ್ಲಿ ದೀಡಕೊರಚರು, ಡಬಲೀಕೊರಚರು (ಕಭಾಗಿ. ೧೮೮). [ದೇ. ॥ ತಮಿ. ಕುರುಜ್ಞ ; ಮಲ. ಕುಱಚ್ಚ ; ತೆಲು. ಕೊರಚ]

**ಕೊರಚಾಟ** 'ಕೊಱಚಾಟ' ನೋ.

**ಕೊರಚಾಡು** 'ಕೊಱಚಾಡು' ನೋ.

**ಕೊರಚಿ** (ನಾ). ಕೊರಚಜಾತಿಯ ಹೆಂಗಸು ; ಕೊರವಂಜಿ : ವಿಹರಿಸುತ ಕಂದರ್ಪನು ಕೊರಚಿಯಾದುದ ಚಂದದಿ ಲಾಲಿಸುವುದು (ಕಂದಕೊ. ೧೯೦–೧). [ಕೊರಚ + –ಇ$_2$]

**ಕೊರಚು** 'ಕೊಱಚು$_1$' ನೋ.

**ಕೊರಟಿಗೆ** 'ಕುರಂಟಿಗೆ' ನೋ.

**ಕೊರಟು** 'ಕೊರಂಟು' ನೋ.

**ಕೊರಟುತಲೆ** 'ಕೊರಂಟುದಲೆ' ನೋ.

**ಕೊರಟುದಲೆ** 'ಕೊರಂಟುದಲೆ' ನೋ.

**ಕೊರಟೆ** (ನಾ). ಗದ್ದೆ ; ಗರಣೆ (?) : ಕೇಳಕರಿಸಿಯುಗುಳ್ದರೆ ಕೊರಟೆ ಕೊರಟೆಯಾಗಿ ಬಾಯಲ್ಲಿ ರಕ್ತಬೀಳುತ . . . ಗಂಡೆಗಳೇಳುವುದೀ ಲಕ್ಷಣ ಮುಕ್ಕೊಡೆ ರಕ್ತಪ್ಪವಿ ಸನ್ನಿಪಾತಮೆನಿಸಿಕೊಂಬುದು (ಸಕವೈ. ೧೬೩). [?]

**ಕೊರಡ** 'ಕೊರಡ್ಡೆ' ನೋ.

**ಕೊರಡಗೆ** (ನಾ). ಗುದ್ದೆ ; ಕೊರಡು (?) : ಕಟ್ಟಿದ ಕೈಪೊಡೆಯ ತೊಳಗುವ ತೋಳ ಕಡೆಯದ ತೋಲ ಕೈಯ ಕೊರಡಗೆ ನಿಗಳದ ಕೊರಲೊಳ್ ಕಾಂತಿಯಂ ಬೀರುವ ಕಂಠವಳಯದ (ಮಹಾನೀ. ೧೨–೨೭ ವ). [?]

**ಕೊರಡು$_1$** 'ಕೊಱಂಡು' ನೋ.

**ಕೊರಡು₂** (ನಾ). ನೆಟ್ಟಗೆ ಇರುವ ಕಾಮನ ಬಿಲ್ಲು; ಮಳೆಯ ಬಿಲ್ಲು: "ಇಂದ್ರಚಾಪ ಸಸಿನೆ ಮೂಡಿದಡೆ ರೋಹಿತ ಎನಿಸುಗು, ಅದು ಕೊರಡು" (ನಾಚರಾ. ೬); ಮೇಲಲೆವ ಮುಗಿಲ ಪೊದಱಿನ ಮೂಲೆಗಳಂ ನೆಗೆದ ಕೊರಡು ಕೊಂಡವೊಲೆತ್ತಂ (ಅನಂತ. ೯-೮); ಪಶ್ಚಿಮಾಶೆಯಲ್ಲಿ(ಯೊಳ್)ಕೊರಡು ಮೂಡುವೊಡಂ (ಜಟ್ಟಮ. ೨-೧).

[? . / ತೆಲು. ಕೊರಡು]

**ಕೊರಡು₃** (ನಾ). (?): ತ್ರಿಸಂಧಿಯ ಸತ್ತಿ ಕೊರಡು (ಎಕ. I, ೧-೨೬; 466). [?]

**ಕೊರಡೆ₁**, ಕೊರಡ, ಕೋರಡ್ಡಿ, ಕೋರಡೆ (ನಾ). ೧. ಬಾರು ಕೋಲು; ಚಬುಕ; ಚಾಟಿ; ಚಾವಟಿ: ಕೊರಡೆಯಂ ಬಡಿಸಿವನ ಬಿಡಿಸಿದಡೆ ಸಾಲದೇ? (ಗೂಳ್ಗೊಥಾ. ೬-೧೫೪). ೨. ಚಾಟಿಯ ಏಟು, —ಹೊಡೆತ: ಇವನಿಗೆ ನೂರಿಪ್ಪತ್ತು ಕೊರಡೆ ಹೊಡಿ (ಕಥಾಮಂ. IV, ೬೭). **ಕೊರಡ:** ೧. "ಚಾವಟ, ಚಬುಕು, ಕೊರಡ, ಬಾರುಗೋಲು" (Whip. ಇಂಆನಿ); ಕಂಕುಳಲ್ಲಿದ್ದ ಕೊರಡವನ್ನು ತೆಗೆದುಕೊಂಡು . . . ಹೊಡೆದುಕೊಳ್ಳಲಾರಂಭಿಸಿದಳು (ಮಗಮಾಂ. ೨೨). **ಕೋರಡ್ಡಿ** : (೬). **ಕೋರಡೆ** : (೬).

[← ಹಿಂ. ಮರಾ. ಕೋರ್ಡಾ. / ಪೋರ್ಚು. corda]

**ಕೊರಡೆ₂** (ನಾ). ಕೊರಡಿನಂಥವಳು; ಒರಟಾದವಳು: ಕೋಡುಗೋಳಿಯೊ ಮೇಣ್ ಮೂಢೆಯೋ ಕೊರಡೆಯೋ ಮೂರ್ಖೆಯೊ ಮುಗುದೆಯೋ (ಮದೇಪು. ೬-೨೧).

[ಕೊರಡು₁ (< ಕೊಱಡು) + -ಎ₂]

**ಕೊರತೆ** 'ಕೊಱಂತೆ' ನೋ.

**ಕೊರತೆಪಡು** (ಕ್ರಿ). ಕಳವಳಿಸು; ಚಿಂತಿಸು: ಕನ್ನಡ ಕವಿತೆಯಲ್ಲಿ ಹೊಸದೇನೂ ಹುಟ್ಟಿಲ್ಲವೆಂದು ಈಗ ಯಾರೂ ಕೊರತೆಪಟ್ಟುಕೊಳ್ಳುವ ಹಾಗಿಲ್ಲ. (ಸಾಹಿಕ. ೬೧). [ಕೊರತೆ (< ಕೊಱಂತೆ) + ಪಡು₁]

**ಕೊರನಾರಿ** 'ಕೊಡನಾರಿ' ನೋ.

**ಕೊರಪ₁**, ಗೊರಪ (ನಾ). ಕುದುರೆಯ ಮೈಯನ್ನು ಉಜ್ಜುವ ಹಣಿಗೆ; ಖರಾರಿ: (೬). **ಗೊರಪ** : (೬).

[ದೇ. ǁ ತಮಿ. ಮಲ. ಕುರಪ್ಪ; ತೆಲು. ಕೊರಪ, ಗೊಱಪ. / ಪ್ರಾ. ಖುರಪ್ಪ]

**ಕೊರಪ₂** (ನಾ). ಕೊರೆದ ಅಡಕೆಯ ಭಾಗ: ಹಸಿಯ ಅಡಕೆಗಳಲ್ಲಿ ಮಧ್ಯೆ ಎಳಸು ಮತ್ತು ಬಹಳ ಎಳಸಾದ ಅಡಿಕೆಗಳನ್ನು ಸಣ್ಣಾಗಿ ಕೊರೆದು ಚೂರುಮಾಡಿ ಕುದಿಸುತ್ತಾರೆ. ಅದರಲ್ಲಿ ಚತುರ್ಭಾಗ ಕೊರಪ, ಲವಂಗ ಚೂರು, ಮೋಡಿ, ಅಣ್ಣಾವಾರ, ದೇಶಾವಾರ ಎಂದು ಬೇರೆ ಬೇರೆ ರಾಶಿಗಳನ್ನು ಮಾಡುತ್ತಾರೆ (ಕೃಷಿಪ್ರ. ೧೫೨). [< ಕೊಱೆ¹ + -ಪ₂]

**ಕೊರಪಣೆ** (ನಾ).= ಕೊರೆತ: ಅಂದು ಸೆಪ್ಟಂಬರ್ ತಿಂಗಳ ಕೊರಪಣೆಯ ಮುಂಜಾನೆ ಚಳಿಗಾಳಿ ರಪರಪನೆ ಹೊಡೆಯುತ್ತಿತ್ತು (ಪುನರು. ೪೮೬).

[< ಕೊಱೆ¹ + -ಅಣೆ₁]

**ಕೊರಪುಳ್ಳಿ** (ನಾ). ಕೊರಡಿನಂತಹ ಪುಳ್ಳೆ: ಕೂರ್ಮಂ . . . ಸುಚ್ಚುನುಱಿಯಾಗೆ ಬಿರ್ದುದಂ ಮಾಂಸಾಹಾರಿಗಳ್ ಕಂಡು ಕೊರಪುಳ್ಳಿಯೊಳ್ ಮೋದಿ ಕೊಂದರ್ (ಪಂಚತಂ. ೧೫೮-೪). [< ಕೊಱಡು + ಪುಳ್ಳಿ]

**ಕೊರಪೆ**, ಗೊರಪೆ (ನಾ). ಬೆಣಚುಕಲ್ಲಿನಂತೆ ಚೂಪಾದ ಅಂಚುಳ್ಳದ್ದು. **ಗೊರಪೆ** : ನಡೆದು ನಡೆದು ಆಳಿಯ ಕಾಲುಗಳಿಗೆ ಗುಳ್ಳೆ ಬಂದಿದ್ದವು. ಒಂದು ಚೂಪಾದ ಗೊರಪೆ ನೆಟ್ಟು ನೆತ್ತರವೂ ಬಂದಿತ್ತು (ನಾಾಲತೀ. ೮೫). [< ಕೊಱೆ¹ + -ಪೆ]

**ಕೊರಬ** 'ಕೊಱವ₁' ನೋ.

**ಕೊರಬು** 'ಕೊಱವ₁' ನೋ.

**ಕೊರಮ** 'ಕೊಱವ₁' ನೋ.

**ಕೊರಮಗೂಡೆ** (ನಾ). ಕೊರವರ ಗೂಡೆ, —ಕುಕ್ಕೆ: ಮಕ್ಕಿ ಮುತ್ತಿನ ಕೊರಮಗೂಡೆಯ ನೆತ್ತಿಯಲಿ ಹರಿ ಪೊತ್ತು ಮೆರೆದನು (ಅರ್ಜಾವಿ. ೧೭-೨೮). [ಕೊರಮ (< ಕೊಱವ₁) + ಗೂಡೆ]

**ಕೊರಮಿ** 'ಕೊಱವಿ' ನೋ.

**ಕೊರಮುಟ್ಟು** (ನಾ). ಕೊರೆಯುವ ಉಪಕರಣ; ಉಳಿ, ಬಾಚಿ ಮೊದಲಾದ ಸಾಧನ: "ಕೊರಮುಟ್ಟು ಶಸ್ತ್ರ" (ಗಂಗಾಮು. ೧೦೨).

[< ಕೊಱೆ¹ + ಮುಟ್ಟು ./ ತೆಲು. ಕೊಱಮುಟ್ಟು]

**ಕೊರಲ್**, ಕೊರಲು, ಕೊರಳ್, ಕೊರಳು (ನಾ). ೧. ಕತ್ತು; ಕುತ್ತಿಗೆ; ಕಂಠ: "ಗ್ರೀವಾ . . . ಕಂಧರಃ, ಗಳಃ, ಕಂಠಃ – ಈ ೭ ಕೊರಲ್" (ಹಲಾಯು. ೬೫-೬೬೨); ಚರಣಾಲಕ್ತಕ ಲಾಂಛನಂ ನಿಟಿಲದೊಳ್ ಕೇಯೂರ ಮುದ್ರಾಂಕಿತಂ ಕೊರಲೊಳ್ (ಕಾವ್ಯಸಾ. ೬೫೫ ಶೂದ್ರಕ); ಬಳ್ಳಿಯಂ ಕೊರಲೊಳ್ ತಗುಳ್ಚಿ (ವಡ್ಡಾರಾ. ೧೨೦-೧೬); ಅಟ್ಟಱಿಂದಂ ಕೊರಲಂ ಬಂದಪ್ಪಿರ್ದಕೊ (ಕಾದಂಪೂ. ೪೮); ಕಪಿಯ ಕೊರಲೊಳ್ ಪೂಮಾಲೆಯುಕ್ಕಿದಂತೆ (ಧರ್ಮಾಮೃ. ೧-೧೧೮); ಗುಬ್ಬಿಯ ಕೊರಲ್ಗೆ ಗೋಧಿಯ ಕಲ್ಲ ಕಟ್ಟಿದೊಡುಬ್ಬಿಯಾಗಸಕೆ ಪಾಱುವುದೇ (ಮೋಹತ. ೧-೨೨). ೨. ಧ್ವನಿ; ಕಂಠ; ಸ್ವರ: ಅಂತೊಂದೆ ಕೊರಲೊಳ್ ಕೊಳೆ ಪಾಡುವ ಬರ್ಬರ ಕಿರಾತೆಯರಿಂಗೊರಲೊಳೊದವಿ ಬಂದು (ಶಾಂತಿಪು. ೨-೨೨೨). ೩. ಮಾತು; ನುಡಿ: ಇಱುವಬೆಡಂಗನ ಕೊರಲೊಳ್ಕೊಂಕುಂಟೆ ನುಡಿಯೊಳೇಂ ತೊದಲುಂಟೆ (ಗದಾಯು. ೨-೬); ನಾಡೆಲ್ಲಮೊಂದೆ ಕೊರಲೊಳ್ ಪೊಗೞೆ (ಧರ್ಮಾಮೃ. ೬-೪೫). **ಕೊರಲು** : ೧. ಭಾಳ ಕೊರಲು ಭುಜ ಉರ ನಾಭಿಯೊಳಂತೆಳು ಪರಮುಷ್ಟದು ಸ್ಥಾನಂಗಳಿಂ (ದೀಕ್ಷಾಬೋ. ೧೧೬-೪); ಬಾಲೆಯ ಕೊರಲು ಹೊನ್ನೊರಲು ಸುಸ್ವರ ಕಹಿ (ನೋಹಕ. ೨-೫೦). **ಕೊರಳ್** : ೧. ಕೊರಳೊಳಮರ್ದಿರ್ಕ್ಕೆ ಕಂಠಾಭರಣಂ (ಶಾಂತಿಪು. ೨-೭೬); ಗಾಳಿಗೊಡ್ಡಿದ ಸೊಡರಂತೆ ನಡುಗಿ ಸೂಳೆಯ ಕೊರಳಂತೆ ಕಗ್ಗಿ (ಧರ್ಮಾಮೃ. ೧-೧೬೮); ತೋರಹಾರಮಂ ಕೊರಳೊಳಿಕ್ಕಿ (ನಂಬರ. ೧೦-೪೪); ನಸು ಮುರಿದ ಕೊರಳ್ಗಳ ಬಿಗಿದ ನರಗಳ (ಬಸಪು. ೪೬-೫೬); ಸುರಗಿರಿಯನಾಸುವ ಕೊರಳ ಸತ್ವವೆ (ಕುಮ್ಯಾಕ. ೨೦-೬೬). **ಕೊರಳು** : ೧. ಆ ಸೂಳೆಯ ಕೊರಳಲ್ಲಿ ಏಳನೂಱಿಪ್ಪತ್ತಾನೆ ನೇಱಿತ್ತಕಂಡೆ (ಅವಚಂ. ೧೦-೬೮); ಇದಱ ಕೊರಳಲಿ ನೇಣನಿಕ್ಕಿದೊಡೆ (ಬಸಪು ೨೮-೪೬); ಗಿರಿಯ ಕೊರಳಿಗೆ ವಜ್ರಮಣಿಯಾಭರಣವೇ (ಕುಮ್ಯಾದ್ರೋ. ೨-೬೬); ಸೋಮುರ್ಮುಡಿಯ ಭಾಳೆ ಕೊರಳು ಕೊಂಕಲು (ನಳಚ. ೫-೫೬). ೨. ಇಂಪಾದ ಕೊರಳಿನಿಂದ ಬಂದರೆ ಅದು ಸಂಗೀತ (ಭಾರದ. ೪೦೫). ೩. ಪರದನನೊಂದೆ ಕೊರಳೊಳು ಜನವು ಪೊಗಳಲು (ಸಾಳ್ವಭಾ. ೭-೫೨). ೪. ಕಾಳಿನ ತೆನೆ, —ಗೊಂಚಲು: ಗಿಳಿಗಳ ಹಸಿರುಹಿಂಡುಗಳು . . . ಬೆಳೆಯ ಮೇಲೆ ಎರಗಿ ಭತ್ತದ ಕೊರಳುಗಳನ್ನು ಕೊಕ್ಕಿನಿಂದ ಕೊಯ್ದು (ಪರಾವ. ೨೦೦); ಬತ್ತದ ಸೂಡಿ ಹೊರುವ ದಿನ ಅವರ ಮಕ್ಕಳು ಉದುರಿದ ಕೊರಳನ್ನು ಬುಟ್ಟಿಯಲ್ಲಿ ಆರಿಸಿಕೊಂಡು ಬಂದುದೂ ಇದೆ (ಬಾಳಿ. ೨೬).

ಕೊರಳನೂಲು = ಮಂಗಳಸೂತ್ರ: ಆ ಬಡವಿಗೆ ಇರುವ ಆಭರಣವೆಂದರೆ ಕೊರಳನೂಲು ಮಾತ್ರ (ರೂಢಿ). ಕೊರಳಿಗೆಕಟ್ಟು = ಮದುವೆಮಾಡು; ಗಂಟುಹಾಕು: ಜಾತಕದ ಬೆನ್ನುಹತ್ತಿ ಈ ಸೊಡಲೆಸಿದ್ದನ ಕೊರಳಿಗೆ ಕಟ್ಟಿದರು (ಮೂರುದಾ. ೬೫); ಗುಲ್ಲೇಳುವ ಮೊದಲೇಯಾರಾದರೂ ಕೊರಳಿಗೆಕಟ್ಟಿಬಿಡೋಣ (ಮೂರುದಾ. ೧೫೫).

ಕೊರಳಿಗೆಬರು = ಮದುವೆಯ ಮಾಂಗಲ್ಯ ಕೊರಳಿಗೆ ಬರು; ಮದುವೆಯಾಗು: ಅವರಲ್ಲನೇಕರಿಗೆ ಇನ್ನೂ ಕೊರಳಿಗೆ ಬಂದಿರಲಿಲ್ಲ (ಸುವಸ್ಮೃ. ೫೬). ಕೊರಳುಬಿಡೆ = ಧ್ವನಿ ಗಡುಸಾಗು; ವಯಸ್ಸು ಬಲಿತುದಕ್ಕೆ ಗುರುತಾಗಿ ಧ್ವನಿ ಗೊಗ್ಗರವಾಗು: ಹಾಲುಹಲ್ಲು ಉದುರಿಲ್ಲ, ಕೊರಳು ಒಡೆದಿಲ್ಲ (ರೂಢಿ). ಕೊರಳುಕಟ್ಟಿಕೊಳ್ಳು = ೧. ಕಂಠ ಗದ್ಗದಿತವಾಗು; ಎದೆಯು ಉಬ್ಬಿ ಇಳಿಯಿತು, ಕೊರಳು ಕಟ್ಟಿಕೊಂಡಿತು (ಮುನಿಮಾ. ೧೯). ೨. ಬಾಚಿ ತಬ್ಬಿಕೊಳ್ಳು; ಅಪ್ಪಿಕೊಳ್ಳು: ಅಪ್ಪ ಸತ್ತ ಆರು ತಿಂಗಳಿಗೆ ಹುಚ್ಚುಮಾವ ಬಂದು ಕೊರಳು ಕಟ್ಟಿಕೊಂಡು ಅತ್ತ (ಗಾದ). ಕೊರಳುಕಟ್ಟು=ಬಂಡಿ ಅಥವಾ ನೇಗಿಲಿಗೆ ಎತ್ತುಗಳನ್ನು ಹೂಡು; ಬಂಡಿಹೂಡು: ನಸುಕಿನಲ್ಲಿಯೆ ಕೊರಳು ಕಟ್ಟಿದರೆ ಬಿಸಿಲೇರುವುದರಲ್ಲಿ ಊರು ಮುಟ್ಟಬಹುದು (ರೂಢಿ). ಕೊರಳುಬಿಚ್ಚು, ಕೊರಳುಬಿಡು, ಕೊರಳುಹರಿ = ಎತ್ತುಗಳ ಕೊರಳ ಮೇಲಿಂದ ನೊಗವನ್ನು ಇಳಿಸು; ಗಾಡಿಬಿಡು: ಗಾಡಿಯ ಬಳಿಗೆ ಬಂದು ಕೊರಳುಬಿಚ್ಚಿ ಎತ್ತಿಗೆ ಹುಲ್ಲು ಹಾಕಿ (ಮುನಿಮಾ. ೬); ಕೆರೆಯ ಬಳಿ ಗಾಡಿ ಕೊರಳುಬಿಡು (ರೂಢಿ); ಇನ್ನು ತಮ್ಮ ಕೊರಳುಹರಿಯುವುದೆಂಬ ನಂಬಿಕೆಯಿಂದಲೋ ಏನೋ ಎತ್ತುಗಳು . . . ಓಡುತ್ತಿದ್ದವು (ರಕ್ತಧ್ವ. ೧೩).

[ದೇ. ‖ ತಮಿ. ಕುರಲ್; ಮಲ. ಕುರಲ್, ಕುರಳ್; ತುಳು. ಕುರೆಲು]

**ಕೊರಲಿಬಾವು** (ನಾ). ದನಿ ಬಿದ್ದುಹೋಗಿರುವುದು; ಧ್ವನಿ ತಗ್ಗಿರುವುದು: ಗಟಗಟ ಸುರಿವಶ್ರುವ ಕೊರಲಿಬಾವಿಗ ಮಗಿಮಟ್ಟಗದಟ್ಟ ಮೊಬಿಗಿಂಗಂ . . . ಇಂದ್ರನುಮುಪೇಂದ್ರನುಂ ಪದನಾದರ್ (ಶಾಂತಿಪು. ೬–೮೯). [ಕೊರಲ್ + ಇಬಾವು]

**ಕೊರಲು** ‘ಕೊರಲ್’ ನೋ.

**ಕೊರಲುದ್ದ, ಕೊರಳುದ್ದ$_1$** (ಗು). ಕುತ್ತಿಗೆಗೆ ಬರುವಷ್ಟು ಆಳವಾದ; ಆಕಂಠಪ್ರಮಾಣವಾದ: ಬೀಳಿಯ ಕರ್ದಿನ ಕೋಲ್ಗೆ ಕೊರಲುದ್ದ ಮಾದೆಳನೀರ ಪೊನಲ . . . ಚೆಲ್ವನೊಳಕೊಂಡಿರ್ಪುದು (ಕಬ್ಬಿಕಾ. ೧೮); ತೊಡೆಯೆರ್ದೆ ಕೊರಲುದ್ದ ಸಲಿಲವಾವೆಡೆಯೆಂದು ಬಿಡಯವಿಲ್ಲದೆ ನೀರ್ಗುಡಿದು (ಮೋಹತ. ೧೯–೫೪). **ಕೊರಳುದ್ದ$_1$**: ಚಳಿಗಾಲವೆಲ್ಲಂ ನಿರುತದಿಂ ಕೊರಳುದ್ದ ನೀರೊಳು ನಿಂದು (ಬಸಪು. ೨–೧೨).

[ಕೊರಲ್ + ಉದ್ದ]

**ಕೊರಲುದ್ದಂ, ಕೊರಳುದ್ದ$_2$** (ಅ). ಕೊರಳು ತುಂಬುವವರೆಗೆ; ಕಂಠಪೂರ್ತಿ: ದಿರಿದೊಳ್ದಾವರೆಗಂಪಂ ಕೊರಲುದ್ದಂ ಪೀರ್ವ ತುಂಬಿಯುನೆ . . . ಇಚ್ಚೆಗಾರ್ತಿಯ ಕಣ್ಗಳ್ (ಕಬ್ಬಿಕಾ. ೩೨೯). **ಕೊರಳುದ್ದ$_2$**: ಗುಳುಗುಳಕ್ಕನೆ ನುಂಗುತಂ ವುದಿಸುತ್ತ ಕೊರಳುದ್ದಕ್ಕೆ ಉಂಟುತ (ಬಸಪು. ೫೯–೨೪). [ಕೊರಲ್ + ಉದ್ದಂ]

**ಕೊರಲುಬ್ಬಸ, ಕೊರಳುಬ್ಬಸ** (ನಾ). ೧. ಕೊರಳು ಬಿಗಿದು ಉಸಿರಾಟ ಕಷ್ಟವಾಗುವಿಕೆ; ತೊಂದರೆ. ೨. ಕಷ್ಟವನ್ನುಂಟು ಮಾಡುವವನು: ಇಂತಪ್ಪ ಸಭೆಗೆ ಕೊರಲುಬ್ಬಸವಿವರು ನೋಡ (ತಿರುರ. ೧೬–೧೭). **ಕೊರಳುಬ್ಬಸ**: ೧. ನಿನಗಿನಿತು ಘನವೆನ್ನನಾರ್ಬಲ್ಲರೆಂದೆನುತೆ ನಿನಗಿನಿತು ಕೊರಳುಬ್ಬಸವಿದಾನೆನಿತಜವನೆನುತೆ (ಮಜೆರ. ೭೭–೧೦). [ಕೊರಲ್ + ಉಬ್ಬಸ]

**ಕೊರಲುಲಿ, ಕೊರಳುಲಿ** (ನಾ). ಕೊರಳಧ್ವನಿ; ಕಂಠಸ್ವರ: ದಿಜ್ಜೋದರಿಯರ ಕೊರಲುಲಿಗಳಿಂದಂ (ಕಬ್ಬಿಕಾ. ೨೬೬). **ಕೊರಳುಲಿ**: ವರ ಪುಳಕಾಂಬುಸೇಚನದೆ ಕೊರಳುಲಿ ಮಂತ್ರದೆ (ಕಂನವಿ. ೬–೧೭೨).

[ಕೊರಲ್ + ಉಲಿ$_2$]

**ಕೊರಲುಲುಹು** (ನಾ). = ಕೊರಲುಲಿ: ಗೌಜು ಕಕರ್ಕಟ . . . ಕಲುಕುಟಕಾದಿ ತೋಟದ ಪಕ್ಕಿಗಳ ಕೊರಲುಲುಹಾದುದಾ ತಪೋವನದಿ (ಮೋಹತ. ೭–೧೭). [ಕೊರಲ್ + ಉಲುಹು (< ಉಲಿವು)]

**ಕೊರಲೆ** ‘ಕೊಐಲೆ’ ನೋ.

**ಕೊರಲೆಹುಲ್ಲು** (ನಾ). ಕೊರಲೆಯ ಹುಲ್ಲು: (ವೈಬಿಗ. ೬೯–೧೪೨೩).

[ಕೊರಲೆ (< ಕೊಜಲೆ) + ಹುಲ್ಲು (< ಪುಲ್)]

**ಕೊರಲೌಂಕು** (ಕ್ರಿ). ಕೊರಳನ್ನು ಅದುಮು, —ಹಿಸುಕು: ಒಂದು ಕುದುರೆಯನೆ ಕೊರಲೌಂಕಿ ಕೊಱಿದನ್ (ಅಶ್ವಶಾ. ೩–೫೦); ಕಾಡ ಕಟ್ಟಳೆ ನಾಡ ಬೇಂಟೆಯಂ ಕೊರಲೌಂಕೆ (ಕಾಲೂರ. ೪೯–೭೨).

[ಕೊರಲ್ + ಔಂಕು (< ಅವುಂಕು)]

**ಕೊರಲ್ಗಳಿ** (ಕ್ರಿ). ಕೊರಳನ್ನು ಕೆಡಹು, —ಬೀಳಿಸು: ಹಚ್ಚಿ ಹರಿದೊಟ್ಟುತ್ತೆ ಕೊಚ್ಚಿ ಕೊರಲ್ಗಳಿವುತ್ತೆ (ನವಮೋ. ೩೩–೩೧).

[ಕೊರಲ್ + ಕಳಿ$_1$ (< ಕಬಿ$_1$)]

**ಕೊರಲ್ಗಱಿ** (ನಾ). ಕೊರಳಲ್ಲಿಯ ಕಪ್ಪು: ಬಾನೊಳ್ ಪೊಱೆ ಬಾಂಬೊಱೆ ಏವಂ ಬಾಂಬೊಱೆ ಪಕೆಗಣ್, ಕೊರಲ್ಗಱೆ (ಶಬ್ದಾನು. ೩೦೫ ಪ್ರಯೋ). [ಕೊರಲ್ + ಕಱೆ$_2$]

**ಕೊರಲ್ಗೋಲ** (ನಾ). ಕೊರಳು ಕತ್ತರಿಸಿ ಮಾಡುವ ಕೊಲೆ: ಚೌಪಟದೇಜೂಟದೊಳ್ ಚದುರಂ ತೋರ್ಪ ಕೈಗೊಲೆ ಬಾಯ್ಗೊಲೆ ಮೈಗೊಲೆ ಕಾಲ್ಗೊಲೆ ಕೊರಲ್ಗೊಲೆ [ಪಾಠಾಂ. ಕೋಳ್ಗೊಲೆ]ಯಂ ಕಲಿಪ ಕಡು ಬಿನ್ನಣಂಬಡೆದು (ರಾಜಶೇ. ೬–೧೧ ವ). [ಕೊರಲ್ + ಕೊಲೆ$_2$]

**ಕೊರಲ್ಗೊಳ್** (ಕ್ರಿ). ಕಂಠಕ್ಕೆ ಸೇರು, —ಒಪ್ಪು: ಎಂತಪ್ಪಂಗಂ ಪೊಸಮುತ್ತಿನಕ್ಕಸರದಂತೆಂದುಂ ಕೊರಲ್ಗೊಳ್ವದೇ (ಕಬ್ಬಿಕಾ. ೫).

[ಕೊರಲ್ + ಕೊಳ್$_1$]

**ಕೊರಲ್ಗೊಱೆ** (ಕ್ರಿ). ಕೊರಳನ್ನು ಕತ್ತರಿಸು: ಪಱಿದಿರ್ದ ಕಂಠಸರಮಂ ಪಡೆವ ಗುಣೆ ಕೊರಲ್ಗೊಱೆಯುತಿರೆ (ಭಾವಚಿಂ. ೯–೪೪).

[ಕೊರಲ್ + ಕೊಱೆ$_1$]

**ಕೊರಲ್ಚು** (ಕ್ರಿ). ಹುಯ್ಯಲಿಡು; ಆಕ್ರೋಶಮಾಡು: “ಕೊರಲ್ಚು – ಆಕ್ರೋಶಧ್ವನೌ” (ಶಮಧಾ); ಗೋಪಗೋಪಿಯರಾಕ್ಷಣಂ ಕೊರಲ್ಚಿದರ್ (ವಿಷ್ಣುಪು. ೫–೩–೧೮೨); ತಮಿಳಲ್ಲಿ ಮುಖರಭಾಷೆಯಿಂದ ಕೊರಲ್ಚಿಯೊಳರಿಕೊಳ್ಳುತ್ತಿದ್ದು (ಮಂತ್ರಶ. ೧೨೨–೫). [ಕೊರಲ್ + –ಚು]

**ಕೊರಲ್ದಂಡೆ** (ನಾ). ಕೊರಳಲ್ಲಿ ಧರಿಸುವ ದಂಡೆ; ಕಂಠಸರ: ಪಾಂಡುರ ಶಂಖ ಪ್ರವಾಳ ದುಂಡು ಮುತ್ತುಗಳಿಂದೆ ಮೇರೆಯುದ್ಧಿಯ ಕೊರಲ್ದಂಡೆಯಂತಿರ್ದುದು (ಮೋಹತ. ೨–೬). [ಕೊರಲ್ + ದಂಡೆ]

**ಕೊರಲ್ವಲೆ** (ನಾ). ಒಂದು ಬಗೆಯ ಬಲೆ; ಕೊರಳಿಗೆ ಬೀಳುವ ಬಲೆ: ಪಿಡಿವಲೆ ಸೆಳೆವಲೆ ಕಾಲ್ವಲೆ ಕೊರಲ್ವಲೆ ನಿಡಿವಲೆ ಪಾಟಿ ಬೆಳ್ಳಾರ ಬಡಿವಲೆ ಬಲುವಲೆಗಾಱರು ಕೂಗಿ ಬೊಬ್ಬಿಡುತ್ತೈದಿದರು (ಮೋಹತ. ೧೯–೧೬).

[ಕೊರಲ್ + ಬಲೆ$_1$]

**ಕೊರಲ್ವಾಗು** (ಕ್ರಿ). ಕೊರಳನ್ನು ಬಾಗಿಸು; ತಲೆತಗ್ಗಿಸು: ಕಿಕ್ಕಿಱಿದ ಫಲಭಾರದಿಂ ಕೊರಲ್ವಾಗಿ ಕಹೊಗ್ಗಿಸಿರ್ದ ಶಾಲಿಗಳ್ (ಚಿಬಪು. ೧೧–೧೦); ಮೊಗಗೆಂಪೇರಿ ಕೊರಲ್ವಾಗುವಳು (ಬಿಟ್ಟು. ೫–೧೮).

[ಕೊರಲ್ + ಬಾಗು$_1$]

**ಕೊರವ$_1$** (ನಾ). ಒಂದು ಜಾತಿಯ ಮೀನು: ಸೀಗಡಿ ಕೊರವಂ ಬಂಪು ಬಸೇಗಂ . . . ಅಗಣಿತ ಶಫರಾಳಿಗಳನೆ ತೆಗೆದರ್ ಬೇಡರ್ (ಶ್ರೀಪುವಿ. ೨೭–೯೧); ಕೊರವಂ ಗೋಜಳೆ ಸಣ್ಣಗಣ್ಣ ನೊರವಂ ಪಂದಿಗನೆಂಬ ಮೀನ್ದೆಗೆದನಾ ಭಕ್ತಂ (ಶ್ರೀಪುವಿ. ೫೭–೮); ಕೊರವನ ಬಾಳೆಯ ಗೆಂಡೆಯ ಮೀನಿನ ಕೊರಗು ಪಡಿಯನೈದಲ್ಪಹುದು (ಭಕ್ತಿಸ. IV, ೧೨–೧೪). [?]

**ಕೊರವ$_2$** 'ಕೊಱವ$_1$' ನೋ.

**ಕೊರವಂಜಿ** 'ಕೊಱವಂಜಿ' ನೋ.

**ಕೊರವಿ** 'ಕೊಱವಿ' ನೋ.

**ಕೊರವಿತ್ತಿ** (ನಾ). = ಕೊರವಂಜಿ ೧: ಸೂಳೆ ಮುಪ್ಪಾಗಿ ಕೊರವಿತ್ತಿಯಾದಳು (ಗಾದೆ). [ಕೊಱವ$_2$ (< ಕೊಱವ$_1$) + -ಇತ್ತಿ]

**ಕೊರವುಕಾರ** (ನಾ). "ಕುಟುಂಬದ ಯಜಮಾನ"(ಹುಲಿಹಾ. ಕೋಶ); ನಾಯಿಗಳ ಬಗುಳು ಮನೆಯ ಕೊರವುಕಾರರನ್ನು ಎಚ್ಚರಿಸಿತು (ಹುಲಿಹಾ. ೮೦). [ಕೊರವು ? + -ಕಾರ$_1$ (< -ಕಾಱ)]

**ಕೊರವೆ** 'ಕೊಱವ$_1$' ನೋ.

**ಕೊರಸಾಟೆ** 'ಕೊಱಚಾಟ' ನೋ.

**ಕೊರಸಿಗನಗಿಡ** (ನಾ). ಒಂದು ಬಗೆಯ ಗಿಡ: ಕೊರಚಗ, ಕೊರಸಿಗನ ಗಿಡ . . . ಕುರ್ಚಿ (ಮೈಔಗಿ. ೪೪-೮೬೬). [?]

**ಕೊರಸು$_2$** (ನಾ). ಒಂದು ಜಾತಿಯ ಹಕ್ಕಿ: ನಿನ್ನ ಭರ್ತಾರಂ ಬೇಂಟೆ ಮಾಡಿ ಪಲವುಂ ಲಾವುಗೆಯುಂಕೆ ಕೊರಸುಂ ಮೊದಲಾಗೊಡೆಯ ಪಕ್ಷಿ ಜಾತಿಗಳಂ ಬಲೆಯನೊಡ್ಡಿ ಪಿಡಿದು ಕಟ್ಟಿ (ವಡ್ಡಾರಾ. ೧೫೧-೩). [?]

**ಕೊರಳ್** 'ಕೊರಲ್' ನೋ.

**ಕೊರಳಾರ** (ನಾ). ಕೊರಳ ಹಾರ; ಕತ್ತಿನ ಸರ: ಕೊರಳಹಾರ ಎಂಬ ಕೊಡಿಗೆಯ ಹೆಸರೇ ರೂಪಾಂತರಗೊಂಡು ಹೀಗೆ ಕೊರಳಾರ ಎಂದಾಗಿದೆ (ಪಾರ್ಸಿಸು. ೪೬). [ಕೊರಳ್ (< ಕೊರಲ್) + ಆರ$_2$]

**ಕೊರಳಿ** (ನಾ). ಒಂದು ಬಗೆಯ ಧಾನ್ಯ (?): ಪಡವಿನೆಡೆಯೊಳ್ ಕೊರಳಿ [ಪಾಠಾಂ. ಕಾಯ್ದೆರಲೆ, ಪದಪಿನರಳೆಗಳೊಳ್ ಕೊಯ್ದರಲೆ] ಗಳುಂ ನಾಂದುವ ಬೇವಿನ ಸರಳಿಗೆಗಳುಂ . . . ಚಂದ್ರಲೇಖೆ ಚಂದ್ರಿಕೆಯಂ ಪಡೆಯೆ ಪರಿಕ್ಲಪ್ತಮಾದ ಪಯೋಧಿಯಂತೆ ಪಿರಿದುಂ ಕಳಕಳಮುನಪ್ಪುಕೆಯ್ದು ಪ್ರಸೂತಿಕಾ ಸದನಕ್ಕೆ ಶೃಂಗಾರಶೇಖರಂ ಬಂದು (ಲೀಲಾವ. ೬-೬೮ ವ). [?]

**ಕೊರಳಿಸು** (ಕ್ರಿ). ಕೊರಳಿಗೆ ತೊಡಿಸು, —ಹಾಕು: ಹುರುಳಿನ ಅರಳರಳಿಸಿ ಮಾಲೆಮಾಡಿ ಕೊರಳಿಸಿ ಹೃದಯ ವೀಜೆ ದೆರಳಿಸಿ (ಅರಳು. ೧೯-೨೦). [ಕೊರಳ್ (< ಕೊರಲ್) + -ಇಸು$_3$]

**ಕೊರಳು** 'ಕೊರಲ್' ನೋ.

**ಕೊರಳುಕೊಯ್ಕ** 'ಕೊರಳುಗೊಯ್ಕ' ನೋ.

**ಕೊರಳುಗಟ್ಟು** (ಕ್ರಿ). ೧. ಕತ್ತು ಹಿಡಿದು ನಿಲ್ಲಿಸು; ಒತ್ತಾಯದಿಂದ ತಡೆ: (ಕ). ೨. ಧ್ವನಿ ಹೊರಡದಂತಾಗು; ಗಂಟಲು ಕಟ್ಟು: ಅವರಿಗೆ ದುಃಖದಿಂದ ಕೊರಳುಗಟ್ಟಿತು (ರೂಢಿ). [ಕೊರಳು (< ಕೊರಲ್) + ಕಟ್ಟು$_1$]

**ಕೊರಳುಗೊಯಿಕ** 'ಕೊರಳುಗೊಯ್ಕ' ನೋ.

**ಕೊರಳುಗೊಯ್ಕ, ಕೊರಳುಕೊಯ್ಕ, ಕೊರಳುಗೊಯಿಕ** (ನಾ). ಕೊರಳು ಕತ್ತರಿಸುವವನು; ಕೊಲೆಗಡಿಕ: ಅಪರಿಂಗಜರಿದಿದನು ರಕ್ಷಿಸಲು ಬಂದೈ ಕೊರಳುಗೊಯ್ಕನೆ ಸುಡಲಿ ಧನುವನು ಹಿಡಿಯಲೇಕೆಂದ (ನಿಘಾಗ. ೧೦-೯೯-೩೪). **ಕೊರಳುಕೊಯ್ಕ**: "ಕೊರಳುಕೊಯ್ಕ; ಕೊಲೆಗೇಡಿ; ಕೊಲೆಗಡಿಕ; ಘಾತುಕ" (Cut-throat. ಇಂಕನ). **ಕೊರಳುಗೊಯಿಕ**: (ಕ). [ಕೊರಳು (< ಕೊರಲ್) + ಕೊಯ್ಕ$_2$]

**ಕೊರಳುಗೊಯ್ಕೆ** (ನಾ). ಕೊರಳು ಕತ್ತರಿಸುವವಳು; ಕೊಲೆಗಡಿಕೆ: ಕೊರಳುಗೊಯ್ಕೆಯ ಕಾಟದಲಿ ನೆರೆ ಕರುಣಿ ಪರಮಾತ್ಮನನು ಕಾಣದೆ ಬಳಲುತಿಹರೆಂದ (ನಿಘಾಗ. ೫-೮-೨೧). [ಕೊರಳುಗೊಯ್ಕ + -ಎ$_2$]

**ಕೊರಳುಗೊಳಿಸು** (ಕ್ರಿ). ಅಂಕೆಯಲ್ಲಿಡು; ತಡೆಹಿಡಿ; ನಿಯಂತ್ರಿಸು: ಚಿತ್ತವ ತಿರುಹಿ ಹಿಡಿದನು ಮನಕೆ ಬುದ್ಧಿಯ ಹಮ್ಮು ಹಮ್ಮುಗೆಯ ಕೊರಳುಗೊಳಿಸಿ ಪರಿಬವಣಿಗೆಯ ಪಾಡಿನಲಿ ಕಾತರಿಸುತವನಿಗೆ ಮೈಯ ನಿತ್ತನು ನೀಡಿ ಭುಜಯುಗವ (ಕುವ್ಯಾಅ. ೬-೬೯); ಕದಳೀವನವನಂಕೆಗೆ ಬರಿಸಿ . . . ಸುರಗಿಯನು ಸಂವರಿಸಿ ಥಂಗಕೆ ಬರಿಸಿ ಬಳುಕುವ ಕೋವಿ ದಾರವ ಕೊರಳುಗೊಳಿಸಿದನಧಟನಂತಕಪುರಕೆ ಪಡಿಸರಿಸಿ (ನಿಘಾಗ. ೮-೨-೧೪). [ಕೊರಳು (< ಕೊರಲ್) + ಕೊಳ್$_1$ + -ಇಸು$_3$]

**ಕೊರಳುಚೌಕ** (ನಾ). ಕತ್ತಿಗೆ ಸುತ್ತಿಕೊಳ್ಳುವ ಚೌಕ, —ವಸ್ತ್ರ: ಅವರು ನಾಲ್ಕು ಘಂಟೆಯವರೆಗೆ ಉಣ್ಣೆಯ ಕೊರಳುಚೌಕವನ್ನು ಹೆಣೆಯುತ್ತಾ ಇರಬೇಕೆ (ನಿಬಂಧ. II, ೪೦೮). [ಕೊರಳು (< ಕೊರಲ್) + ಚೌಕ]

**ಕೊರಳುದ್ದ$_1$** 'ಕೊರಲುದ್ದ' ನೋ.

**ಕೊರಳುದ್ದ$_2$** 'ಕೊರಲುದ್ದಂ' ನೋ.

**ಕೊರಳುಪಟ್ಟಿ** (ನಾ). ೧. ಕತ್ತಿಗೆ ಹೊಂದಿಕೊಳ್ಳುವ ಅಂಗಿಯ ಭಾಗ; ಕಾಲರು: ತನ್ನ ಸಮವಸ್ತ್ರದ ಕೊರಳುಪಟ್ಟಿಯ ಮೇಲೆ . . . ಸವರುತ್ತಿದ್ದನು (ಪುನರು. ೨೬). ೨. ಕತ್ತಿಗೆ ಸುತ್ತಿಕಟ್ಟುವ ಬಟ್ಟೆ: (ಕ). ೩. ನಾಯಿ ಮುಂತಾದ ಪ್ರಾಣಿಗಳನ್ನು ಕಟ್ಟುವುದಕ್ಕಾಗಿ ಅವುಗಳ ಕತ್ತಿಗೆ ಹಾಕಿದ ತೊಗಲಿನ ಪಟ್ಟಿ; ಕುತ್ತಿಗೆಪಟ್ಟಿ. [ಕೊರಳು (< ಕೊರಲ್) + ಪಟ್ಟಿ$_2$]

**ಕೊರಳುಬ್ಬಸ** 'ಕೊರಲುಬ್ಬಸ' ನೋ.

**ಕೊರಳುಲಿ** 'ಕೊರಲುಲಿ' ನೋ.

**ಕೊರಳುವಿಡಿ** (ನಾ). ಕೊರಳನ್ನು ಹಿಡಿಯುವುದು; ಕಂಠಗ್ರಾಹ; ಆಪತ್ತು (?): ತಾ ಹಿಡಿದ ಸೀಮೆಗೆ ಕಲೆವಿಡಿ ಕೊರಳುವಿಡಿ ಬಾರದೆ ವ್ರತಮ ಘಟವಾಗಿ ಸನ್ಮಾರ್ಗವೆ ಆತ್ಮನಾಗಿ (ಏಲೇಶ್ವ. ೧೬೦). [ಕೊರಳು (< ಕೊರಲ್) + ಪಿಡಿ$_2$]

**ಕೊರಳೇರು** (ಕ್ರಿ). ಧ್ವನಿಹುಟ್ಟು; ಕೂಗು: ಹೂ ಕೆಂದಳಿರುಗಳನ್ನು ಸವಿದು ಮೌನವ್ರತವನ್ನುಳಿದು ಕೊರಳೇರಿಂದ ತುಂಬಿ ಕೋಗಿಲೆಗಳು (ನಾಡೋಜ. ೨೩೮). [ಕೊರಳು (< ಕೊರಲ್) + ಏರು$_1$ (< ಏಱ್$_1$)]

**ಕೊರಳೋಳಿ** (ನಾ). ಕೊರಳುಗಳ ಸಾಲು; ಕಂಠಗಳ ಸಮೂಹ: ಕೋದಂಡವನು ಜೇವೊಡೆಯೆ ಮೇಲು ಜಗವಲ್ಲಾಡಿದವು ಕೊರಳೋಳಿ ಕೆದಱಿತು ಕುಸಿದನಹಿ (ಕುವ್ಯಾದ್ರೋ. ೪-೫೬). [ಕೊರಳು (< ಕೊರಲ್) + ಓಳಿ]

**ಕೊರಳ್ಕಾಪು** (ನಾ). ಕೊರಳಿಗೆ ರಕ್ಷೆಯಾಗಿರುವ ಕವಚ: "ಕೊರಳ್ಕಾಪು, ಕಂಠತ್ರಾಣ" (Gorget. ಇಂಕನಿ). [ಕೊರಳ್ (< ಕೊರಲ್) + ಕಾಪು]

**ಕೊರಳ್ಕೊವ್ವಿಸು** (ಕ್ರಿ). ಕೊರಳನ್ನು ಒಡ್ಡು; ಕುತ್ತಿಗೆ ನೀಡು (?): ಎಮ್ಮಯ ವಂಶ ದಿಕ್ಕರಿಗಳೆಂಟುಮಿಳಾತಳಭಾರಮಂ ಕೊರಳ್ಕೊವ್ವಿಸಿ ಪೊತ್ತು ನಿಸ್ತರಿಸುತಿರ್ದೊಡಂ (ಬಾಧಪು. ೪-೮೩). [ಕೊರಳ್ (< ಕೊರಲ್) + ಕೊವ್ವಿಸು ?]

**ಕೊರಿ** (ನಾ). ತುಂಡಾದುದು; ಮುಳ್ಳುಕಂಟಿಯಿಂದ ಕಡಿದು ತಂದ ದೊಡ್ಡ ಶಾಖೆ: (ಕ). [< ಕೊಱೆ$_1$]

**ಕೊರಿಕುಂದ** 'ಕೊಱೂಕುಂದ' ನೋ.

**ಕೊರಿಗೊರಿ** (ನಾ). ಒಂದು ಬಗೆಯ ಮೂಲಿಕೆ: "ಕೋಕಿಲಃ – ಕೋಗಿಲು, ಕೊರಿಗೊರಿಯಸೊಪ್ಪು" (ಔಷಧಿ. ೪೦). [?]

**ಕೊರಿಪಿಡಿ** (ನಾ). ತೊಂದರೆ; ಪೀಡೆ; ಹಿಂಸೆ: (ಕ). [← ಮರಾ. ಗುರಪಟಾ, ಗುರಫಟಾ ?]

**ಕೊಱಿವೋಗು** (ಕ್ರಿ). ಕತ್ತರಿಸಿಹೋಗು; ನಿಂತುಹೋಗು: ಅಟೋತ್ರೋನ್ ಪ ಞ್ಚ ಮಹಾಪಾತ್ಕ್ಕ ಒ ಕ್ಕ ಲ್ಕೊ ಱಿ ವೋ ೯ ಗು ಗೆ (ಎಕ. XIV, ತಿರುಮ. ೧೫೧-೯ ; ?). [< ಕೊಱ$_5$ + ಪೋಗು$_1$]

**ಕೊಱಿಯಿಸು** 'ಕೊಱಿಸು' ನೋ.

**ಕೊಱಿವಿ** 'ಕೊಱವಿ' ನೋ.

**ಕೊಱುಮೆಲ್ಲಿ** (ನಾ). ಒಂದು ಊರಿನ ಹೆಸರು: ಅಗ್ರಹಾರೀಕೃತಃ ಕೊಱುಮೆಲ್ಲಿನಾಮಾ ಗ್ರಾಮಃ (ಇಆ. XIV, ೫೪-೧೦೭ ; 944). [?]

**ಕೊಱುಱು** (ನಾ). (?): ಮಹಾದೇವರ ದೇವದೂವಿನಲ್ಕಾಪತ್ತರ ಲೊಂದು ಕೊಱುಱು ಊರಲೊಕ್ಕಲಲೊನ್ದು ಪೂಱಯುಂ ಸತ್ತು ಕೊಳಗ ಛತ್ತ್ರಮುಂ (ಮೈಆರಿ. ೧೯೪೭, ೨೮-೧೭ ; 1032). [?]

**ಕೊಱೆ$_1$** 'ಕೊಱೆ$_1$' ನೋ.

**ಕೊಱೆ$_2$, ಗೊಱೆ$_1$** (ಕ್ರಿ). ಗೊರಕೆ ಹೊಡೆ: "ಕೊಱೆ - ನಿದ್ರಾಂಗ ಧ್ವನಾ" (ಗೊರಕೆಹೊಡೆ)" (ಶಮುಧಾ); ಕೊಱೆವೊಡೆ ಬೆಟ್ಟುಗಳ್ ಬಿರಿವುವುಱ್ಕುವ ಲಾಳಿಯ ಲೋಳೆಗಳ್ ಪೊ ನ ಲ್ವ ರಿ ವು ವು (ಪಂಪಭಾ. ೪-೧೦೦); ಕೊಱೆದುಂ ಸುಯ್ದುಂ . . . ನಿದ್ರೆಯನೆ ಕೆಡಿಪ (ಧರ್ಮಾಮೃ. ೨-೫೪). **ಗೊಱೆ$_1$**: ಕೋಟ ಡಿಂಡಿಮಗಳನು ಬಾರಿಸೆ ಗೋಟು ತುಂಬಿತು ಜಗದ ಕಿವಿಗಳ ಪಾಟ ಹೊಟ್ಟಿತು ಕೇಳನಾ ಖಳಗೊಱೆದು ತೆಕ್ಕುತಿರೆ (ಕೌಶಿರಾ. ೨೪-೪); ಸರಿಯಾದ ಜೋಡಿಯು ಈ ಗಂಡಹೆಂಡಿರು . . . ಅಹುದಹುದೆಂದನು ಗೊಱೆಯುವನೀತನು ಈಕೆಯೊ ಶತಕೆಪ್ಪಿಯಂತೆ (ಇಂಚಾಪ.೧೨೭-೨೫); ನಾನಾಸಾಹೇಬ ಸ್ವಲ್ಪದೂರದಲ್ಲಿ ಮಲಗಿಕೊಂಡು ಸೂರು ಹಾರಿಹೋಗುವ ಹಾಗೆ ಗೊಱೆಯುತ್ತಿದ್ದ (ಖದುಜ. ೧೬೧). [?]

**ಕೊಱೆ$_3$** 'ಕೊಱೆ$_4$' ನೋ.

**ಕೊಱೆ$_4$** 'ಕೊಱೆ$_5$' ನೋ.

**ಕೊಱೆ$_5$** 'ಕೊಱೆ$_6$' ನೋ.

**ಕೊಱೆ$_6$** 'ಕೂಱೆ' ನೋ.

**ಕೊಱೆ$_7$** (ನಾ). ದಂಡೆ; ತೀರ; ತಟ: ಸರ್ವರೂ ಗೊಬ್ಬರವನ್ನು ಕೂಡಿಸಿ ತಮ್ಮ ಹೊಲಗಳಿಗೂ ತೋಟಗಳಿಗೂ ಕೆರೆ ಕೊಱೆಗಳಿಗೂ. . .ಹಾಕಬೇಕು (ಕೃಷಿಪ್ರ. ೪೭); ಗರಸಿನ ಕೊಱೆಯ ಮೇಲೆ ಒಂದೆರಡು ಸಲ ಆವರಕಾಲು ಹುಳಿದು ಸರ್‍ರನೆ ಜಾರುವಂತಿತ್ತು (ರಕ್ತಧ್ವ. ೧೫೨). [< ಕೋಱೆ ?]

**ಕೊಱೆಕಂಬಿ** (ನಾ). ಕೊರೆಯುವ ಸಾಧನ: "ತೆಳುವಾದ ಮೊನೆ ಸಲ ಕರಣೆ; ಕೊಱೆಕಂಬಿ" (Stylet. ಇಂಕನಿ). [ಕೊಱೆ$_1$ (< ಕೊಱೆ$_1$) + ಕಂಬಿ$_1$]

**ಕೊಱೆಕರೆ** (ನಾ). ಕೊರೆಯುವ ಅಂಚು; ಮೊನಚಾದ ತುದಿ (?): ಅಲ್ಲಿ ಬಯಕೆ ಸಲಾಕೆ ಮೇಲೆ ತೇಲುವ ಹೆಣ್ಣು ಕಣ್ಣು ಕೊಱೆಕರೆ ಮಾಯೆಗನ್ನಡಿಯಲಿ ತೆರೆತೆರೆವ ಸರಿವ ಹೊಸ ಹೊಸ ಲೋಕಲಾಳಿಯಲಿ ಇಂದ್ರಜಾಲದ ಮಿಂಚುದಾರಗಳಲಿ (ನಡಬಂ. ೪೦-೬). [ಕೊಱೆ$_1$ (< ಕೊಱೆ$_1$) + ಕರೆ$_4$]

**ಕೊಱೆತ** 'ಕೊಱೆತ' ನೋ.

**ಕೊಱೆದಿನ** (ನಾ). (ಕೆಲಸಗಾರನು) ಕೆಲಸಕ್ಕೆ ಬಾರದೆ ತಪ್ಪಿಸಿ ಕೊಂಡದಿನ, —ಉಳಿದ ದಿನ: (ಶ). [ಕೊಱೆ$_3$ (< ಕೊಱೆ$_4$) + ದಿನ]

**ಕೊಱೆನೋಟ** (ನಾ). ತೀಕ್ಷ್ಣವಾದ ನೋಟ; ಹರಿತವಾದ ದೃಷ್ಟಿ: ಸಾಣೆಯೊಳ್ ತೀಡಿದ ಮಾರನ ತೀರಿನಂತಿರುವ ಕೊಱೆನೋಟ (ಸೌಗಂಧಿ. ೨೨೪-೬). [ಕೊಱೆ$_1$ (< ಕೊಱೆ$_1$) + ನೋಟ]

**ಕೊಱೆಪ್ರಾಣ** (ನಾ). ಕುಗ್ಗುತ್ತಿರುವ ಜೀವ; ಹೋಗುತ್ತಿರುವ ಪ್ರಾಣ: (ಶ). [ಕೊಱೆ$_3$ (< ಕೊಱೆ$_4$) + ಪ್ರಾಣ]

**ಕೊಱೆಬೀಳು** (ಕ್ರಿ). ಕೊರತೆಬೀಳು; ಕಡಮೆಯಾಗು: ರಾಮಾಯಣ ಮಹಾಭಾರತಗಳು ಕೊಱೆಬೀಳದ ಗಣಿಗಳ ಹಾಗೆ (ಅಹಲ್ಯೆ. ೩ ಪ್ರಸ್ತಾವನೆ). [ಕೊಱೆ$_3$ (< ಕೊಱೆ$_4$) + ಬೀಳು$_1$ (< ಬೀೞ್$_1$)]

**ಕೊಱೆಮೂಗಿ** (ನಾ). ಕೊರೆಯಾದ ಮೂಗುಳ್ಳವಳು: ಅಣ್ಣಾ ನಿನ್ನಾ ಹೆಂಡ್ತಿ ಅರೆಮೂಗಿ ಕೊಱೆಮೂಗಿ (ಹಳ್ಳಿಯ. ೧೦೫). [ಕೊಱೆ$_3$ (< ಕೊಱೆ$_4$) + ಮೂಗು + -ಇ$_3$]

**ಕೊಱೆಯ** (ನಾ). ಕೊರತೆಯುಳ್ಳವನು: ಅಳವಿನುಂ ತಿಳಿವಿನುಂ ಕೊಱೆಯನಾಂ ನಲ್ಲೆಯಂ ಕಾಣದಳವಳಿದನೆನೆ ಕೇಳ್ವುದೇನಂ (ಸೌನಂದ. ೭-೪೬). [ಕೊಱೆ$_3$ (< ಕೊಱೆ$_4$) + -ಅ$_7$]

**ಕೊಱೆಯಕ್ಕಿ** (ನಾ). ಅಳೆಯುವಾಗ ಕೊರತೆ ಬಿದ್ದ ಅಕ್ಕಿ; ಅಳತೆಗೆ ಕಡಿಮೆಯಾದ ಅಕ್ಕಿ: (ಶ). [ಕೊಱೆ$_3$ (< ಕೊಱೆ$_4$) + ಅಕ್ಕಿ$_1$]

**ಕೊಱೆಯಿಸು** 'ಕೊಱೆಯಿಸು' ನೋ.

**ಕೊಱೆಯುಳಿ** (ನಾ). ಕೊರೆಯುವ ಕೆಲಸಕ್ಕಾಗಿ ಬಳಸುವ ಸೂಕ್ಷ್ಮವಾದ ಉಳಿ: "ಕೆತ್ತನೆಗಾರನ ಕೊರೆಯುವ ಉಳಿ; ಕೊಱೆಯುಳಿ" (Scooper. ಇಂಕನಿ). [ಕೊಱೆ$_1$ (< ಕೊಱೆ$_1$) + ಉಳಿ$_6$]

**ಕೊಱೆಸಂಬಳ** (ನಾ). ಸಂಬಳದಲ್ಲಿ ಕೊಡದೆ ಉಳಿದುದು; ಸಂಬಳದಲ್ಲಿ ಬಾಕಿ: (ಶ). [ಕೊಱೆ$_3$ (< ಕೊಱೆ$_4$) + ಸಂಬಳ]

**ಕೊಱೆಸು** 'ಕೊಱೆಯಿಸು' ನೋ.

**ಕೊಱೆಸೂಜಿ** (ನಾ). ಕೆತ್ತನೆಯ ಕೆಲಸಕ್ಕಾಗಿ ಬಳಸುವ ಮೊನೆಯಾದ ಸೂಜಿ: "ಕೊಱೆಸೂಜಿ, ಕೆತ್ತುವುಳಿ" (Etching-needle ಇಂಕನಿ). [ಕೊಱೆ$_1$ (< ಕೊಱೆ$_1$) + ಸೂಜಿ]

**ಕೊರ್ಕು** 'ಕೊಕ್ಕು$_3$' ನೋ.

**ಕೊರ್ಚು$_1$, ಕೊಚ್ಚು$_3$** (ಕ್ರಿ). ಕತ್ತರಿಸಿ ಹಾಕು; ತರಿದುಬಿಡು; ತುಂಡುಮಾಡು: ಖಂಡಿಸಿ ಕೊರ್ಚಿಡಿಱದಟ್ಟ ಮುಟ್ಟ (ದಿವ್ಯಸೂ. ೯-೩೨); ಮೃದುಳಪದ ಕಾನನದ ವಿನ್ಯಾಸದ ವಿರಳದ ಕಾಷ್ಠ ಕೊ[ಪಾಠಾಂ. ಕಷ್ಟಕೋ]ರ್ಚುವದೆಂತು ಸುಕುಮಾರಿ ನಡೆವಳೆಂತು (ವೆಂಕಾರಾ.೨-೧೨-೩). **ಕೊಚ್ಚು$_3$**: ಹೆಚ್ಚಿದ ಹರುಷವ ಕೊಚ್ಚಿದೆಮಗನೆ (ಹಜಕಾ. ೧೨-೩೭ ರಗಳೆ); ದಾನವಕುಳವೆಲ್ಲವ ಕೊಚ್ಚಿ (ಅಂಜಚ.೧೪-೧೦); ಕಿಚ್ಚುಗಿಡಿಗೆದಱುವ ಶಿಳೀಮುಖ ಕೊಚ್ಚಲಿಭದವಯವವನು (ಕುವ್ಯಾದ್ರೋ. ೧೨-೨೧); ಕಿಚ್ಚ ಬಂದ ಕಾಳಿಂಗನ ಕೊಚ್ಚಲು ಮಡುವ ಧುಮುಕಿದನಂತೆ (ಪುರಂದ. ೨-೧೯-೩). [ಕೊಱೆ$_1$ (< ಕೊಱೆ$_1$) + -ಚು]

**ಕೊರ್ಚು$_2$** 'ಕೊಚ್ಚು$_1$' ನೋ.

**ಕೊರ್ಚು$_3$** 'ಕೊಚ್ಚು$_4$' ನೋ.

**ಕೊರ್ಚು$_4$** 'ಕೊಚ್ಚು$_7$' ನೋ.

**ಕೊರ್ಜು** (ನಾ). ಒಂದು ಬಗೆಯ ಸಸ್ಯ: ಕೊಡಚಗ . . . ಕೊರ್ಜು, ಕಹಿಕೊಡ್ಸೀಗೆ ಗಿಡ (ಮೈಔಗಿ. ೪೪-೮೬೬). [?]

**ಕೊರ್ಪು** (ನಾ). ಶಸ್ತ್ರವಿದ್ಯೆಯ ವರಿಸೆಗಳಲ್ಲಿ ಒಂದು (?): ಗಮಕಂ ಕೊಂಕಾಂಕೆ ಝುಂಕಾಳ ತೆವಳಿ ಉಳಿಲಾಗಾರ್ಪು ಕೊಪಾರ್ಂತ ಬಿಂಕಂ . . . ಎಂದೆನಿಪನಿತಱ ವೈಚಿತ್ರ್ಯದಿಂ ತಾನೆ ಶಸ್ತ್ರಾಗಮ ಶಿಕ್ಷಾಚಾರ್ಯನೆಂಬೊಂದೆಸಕದಿನೆಸೆದಂ (ಕುಸುಮಾ. ೭-೩೪). [?]

**ಕೊರ್ಬಿಸು** 'ಕೊರ್ವಿಸು' ನೋ.

**ಕೊೞ್ಬು$_1$** 'ಕೊರ್ವು$_1$' ನೋ.

**ಕೊೞ್ಬು$_2$** 'ಕೊರ್ವು$_2$' ನೋ.

**ಕೊೞ್ಬುಗಳೆ** (ಕ್ರಿ). ಕೊಬ್ಬನ್ನು ಕಳೆ; ಸೊಕ್ಕುಮುರಿ: ಖಬ್ಬರದೆ ಬರ್ಪ ಹಯಬಲದಬ್ಬರಣೆಗೆ ಕೊೞ್ಬುಗಳೆದುದಿರ್ಕೆಱಿಗೆ (ಚಿಕವಿ. ೨-೯೭). [ಕೊೞ್ಬು$_2$ (< ಕೊರ್ವು$_2$) + ಕಳೆ$_1$]

**ಕೊರ್ಬುಗುಡು** (ಕ್ರಿ). ಕೊಬ್ಬಿಸು; ಸೊಕ್ಕಿಸು: ತಮಮಂ ಸೆಱಗೆಯ್ದು ಹಿಮಕ್ಕೆ ಕೊರ್ಬು[ಪಾಠಾಂ. ಕೊಂಬು]ಗೊಟ್ಟಾಲವಂ (ಪಂರಾಮಾ ೬-೧೨೬). [ಕೊರ್ಬು$_2$(< ಕೊರ್ವು$_2$)+ಕುಡು$_1$(< ಕೊಡು$_1$)]

**ಕೊರ್ಬುವಡೆ** 'ಕೊರ್ವುವಡೆ' ನೋ.

**ಕೊರ್ಮಾತಿ** 'ಕೊಱವತಿ' ನೋ.

**ಕೊರ್ಲೆ** 'ಕೊಱಲೆ' ನೋ.

**ಕೊರ್ವಿಸು, ಕೊಬ್ಬಿಸು, ಕೊರ್ಬಿಸು** (ಕ್ರಿ). ೧. ಹೆಚ್ಚಿಸು; ವೃದ್ಧಿಪಡಿಸು; ಬಲಿಸು: ಶ್ರೀಯಂ ಕೊಱಿಸಲಾಜ್ಞೆಯಂ ಪಸರಿಸಲ್ ಶಕ್ತಿತ್ರಯಂ ಕೊರ್ವಿಸಲ್ (ಲೀಲಾವ. ೩-೪೬); ಅನೇಕೋಲ್ಕಾಂಬುಗಳ್ ಶಸ್ತ್ರದೀಪ್ತಿಗಳಂ ಕೊರ್ವಿಸೆ (ವರ್ಧಪು. ೮-೪೧); ನಸುನಗೆಯ ಬಾಯ್ಗುಮುರ್ದ ಸೊಂಪು ಸೊಂಪಂ ಕೊರ್ವಿಸಲ್ (ಚಬಪು. ೧೧-೪೧). ೨. ಹೆಚ್ಚಾಗು; ಬಲಿ; ಅಧಿಕವಾಗು: ಬೞಿಕವಳ ಕಾಮಾಗ್ನಿ ಕೊರ್ವಿಸೆ (ಸಾಳ್ವಭಾ. ೧೬-೧೯). **ಕೊಬ್ಬಿಸು**: ೧. ಅವರ ಮನೆಯ ಹೋರಿಯನ್ನು ಚೆನ್ನಾಗಿ ಕೊಬ್ಬಿಸಿ ಬೆಳೆಸಿದ್ದಾರೆ (ರೂಢಿ). **ಕೊರ್ಬಿಸು**: ೧. ಮರಾಳಂಗಳಂ ಪದ್ಮಷಂಡಂ ನಳಿನೀ ಕಾಂಡಂಗಳಿಂ ಕೊರ್ಬಿಸೆ (ಮಲ್ಲಿಪು. ೨-೩೪).

[ಕೊರ್ವು$_1$ + -ಇಸು$_3$]

**ಕೊರ್ವು$_1$, ಕುರ್ವು, ಕೊಬ್ಬು$_1$, ಕೊರ್ಬು$_1$** (ಕ್ರಿ). ೧. ಹೆಚ್ಚಾಗು; ಅಧಿಕವಾಗು: ದ್ರುಪದನಂ ತಱಿದೊಟ್ಟಿದೆ ಕೆಮ್ಮಗಾನಿದಂ ಕಡೆಗಣಿಸಿರ್ದೊಡೆನ್ನ ಕಡುಗೊರ್ವಿದ ತೋಳ್ಗಳ ಕೊರ್ವದೇವುದೋ (ಪಂಪಭಾ. ೩-೬೬); ಪರ್ವಿ ಕೊರ್ವಿ ಸುರ್ವುಗೊಂಡ ಮಾಧವಿಯ ಪೊದೆಱೊಳ್ (ಪಂಚತಂ. ೨೩೧-೬); ದರಹಾಸಜ್ಯೋತ್ಸ್ನೆಯಿಂ ದರ್ಪಕ ವಿಶದಯಶಂ ಕೊರ್ವೆ (ಜಗವಿ. ೧೦-೧೬). ೨. ದಪ್ಪನಾಗು; ತೋರವಾಗು; ಬಲಿ: ಬೞೆವ ಮೊಲೆಯಂತೆ ಕೊರ್ವಿ (ಧರ್ಮಾಮೃ. ೨-೧೦೫); ನಿಕ್ಕಿ ಕೊರ್ವಿದ ಕುಚಂಗಳ್ಗೆ ಪೊಣರ್ವಕ್ಕಿ ಗವಸಣಿಗೆ (ನಂಬಿರ. ೧೪-೧೫); ಉರ್ವಿದ ಮುಯ್ಯು ಕೊರ್ವಿದ ಪೆಗಲ್ (ಪುಷ್ಪಪು. ೩-೧೫); ನಾಡೆ ಕೊರ್ವಿ ತಿಂತಿಣಿವಣ್ಣಗಾಂತ ಕದಳಂ (ಚಬಪು. ೧೧-೨೨). ೩. ಉಬ್ಬು; ಉತ್ಸಾಹಿಸು: ಕುಣಿವುತಂ ಕುಕಿಲಿಱುವುತಂ ಪರ್ವಿ ಕೊರ್ವುತಂ (ಬಸರ. ೧-೩೬); ಘನಹರ್ಷದಿಂದುರ್ವಿ ಕೊರ್ವಿ ಗುರುಚರಣದೊಳ್ಪೊಳ್ದು (ಪದ್ಮರಾ. ೧೨-೫೧). ೪. ಸೊಕ್ಕು; ಅಹಂಕಾರಪಡು; ಮದವೇರು: ಅಂತಳವಿಗಱಿಯೆ ಕೊರ್ವಿದ ಕೀಚಕವನಮೆಲ್ಲಮೊಂದಿರುಳೊಳ್ ಸಾಹಸ ಭೀಮನುದ್ದಾಮ ಕೋಪದವದಹನ ಜ್ವಾಲಾಸಹಸ್ರಂಗಳಿನಱ್ಕಿ ಮೆಱ್ಕಿದಂ ತಪ್ಪುದು (ಪಂಪಭಾ. ೮-೮೦ ವ); ನೀನಱಿಯದೆ ಕೊರ್ವಿ ಚಪಳತನದಿಂದೆನ್ನಂ ಮಾನಿಸಿಯೆಗೆತ್ತು ನುಡಿದೈ (ಧರ್ಮಾಮೃ. ೬-೧೧೨); ಅವಯವ ಮಂತ್ರವನೆ ನೆರ್ಮಿ ಕೊರ್ವದಿರು ವೈಭಾಷಿಕಾ (ಪದ್ಮರಾ. ೧೧-೧೯೬); ಹುಟ್ಟು ದರಿದ್ರಗೆ ಬಹಳ ಸಂಪದವರೆ ನೆಟ್ಟನೆ ಕೊರ್ವು ವಂದದಲಿ (ಮೋಹತ. ೧೬-೫). **ಕುರ್ವು**: ೧. ಉರ್ವಿದನೆ ಕುರ್ವಿದನೆ ಜಗದೊಳು ಜರ್ವಿದನೆ (ಸಾನಂಚ... ೮-೮೮). **ಕೊಬ್ಬು$_1$**: ೧. ರಿಪುಸರ್ಪದಳ . . . ಕಲ್ಪಮೇಘದ ಸರಿವಳೆಗೆ ಸಿಗುರೆದ್ದು ಕೊಬ್ಬಿದ ಕದಳಿನಂದದಲಿ (ಕುವ್ಯಾಕ. ೧೨-೬). ೨. ನಸಿದು ಬೆಳೆಯದೆ ಕೊಬ್ಬಿದೊಡ್ಡಿತಹ ತೆನೆಗಳೊಳು (ಸಿದ್ಧರಾ. ೨-೨೯); ಗರುಡನೆತ್ತಲು ಕೊಬ್ಬಿದೊಳ್ಳೆಯಮುಱಿಯದೆತ್ತಲು (ಕುವ್ಯಾಕ. ೯-೬); ಕೊಬ್ಬಿದ ಭುಜಯುಗಳದಿ ವೀರರಸದಿಂದುಬ್ಬಿದ ನಿಡುದೋಳ್ಗಳೆಡೆಯ (ಮೋಹತ. ೩೬-೫೬); ಕೊಬ್ಬಿದ ಪೊಱಿವಾಱು ಪಿಡಿನಡು ಕೊಂಕಿದ ಹುಬ್ಬಿನ ಪೆಣ್ಣೊಂದು (ಭರತ. ೨-೪೮). ೩. ಕೂಡಲಸಂಗನ ಶರಣರು ಬಂದರೆ ಉಬ್ಬಿ ಕೊಬ್ಬಿ ಹರುಷದಲೋಲಾಡುವೆ (ಬಸವ. ೩೬೬); ಕಲಿತನದ ಮುಸಕದಿಂದುಬ್ಬುವರ್ ಕೊಬ್ಬುವರ್ (ಚಬಪು. ೩೯-೨೪). ೪. ಎಲವೊ ಅಧಮಾ ಕೊಬ್ಬಿದೆಯಲಾ (ಬಸಪು. ೨೨-೫೪); ಕೊಬ್ಬಿನರಿ ಹೆಬ್ಬುಲಿಯ ಕೂಸನು ಬೇಡುವಂದದಿ (ಕುವ್ಯಾದ್ರೋ. ೫-೭೨); ಮಾಹಿಷ್ಮತೀಪುರದೊಡೆಯ ತಾಮಸದಿ ಕೊಬ್ಬಿರಲು . . . ಅವರ ಸಾಸಿರ ತೋಳ್ಗಳಡವಿಯ ಕಡಿದಾತನೀತ (ಮೋಹತ. ೩೬-೨೬). **ಕೊರ್ಬು$_1$**: ೧. "ಕೊರ್ಬು – ಸಮೃದ್ಧೌ" (ಶಮುಧಾ); "ಕೊರ್ಬಿದುದೆಂದು ಪೆರ್ಚುಗೆಯ ನಾಮದೊಳಂ" (ಕರ್ಣಾನಿ. ೨೦); ಎಡೆವೊತ್ತಿ ಪೊಕ್ಕು ಕೆಲನಂಕೊರ್ಬುತ್ತೆಸೆದು ಬಿದಿರ್ದಾರ್ದು (ಕವಿರಾ. ೧-೬೬). ೨. ಅನವರತಂ ಮೃಗಮಾಂಸಾಶನದಿಂದಮೆ ಕೊರ್ಬಿದ . . . ಈ ತನುವೆಂದಡಿಗಡಿಗೆ ಪೇಸುತಿರ್ದುದು ಮನದೊಳ್ (ವರ್ಧಪು. ೧೨-೩೦). ೩. ಕೊರ್ಬಿಯಾಡುವ ಡುಂಡುಭಂಗಳಂ ಕಂಡು (ಪಂಚತಂ. ೧೨೩-೨೧); ತಾಂ ಸಾಷ್ಟಾಂಗದಿಂ ತುಳಿಲ್ಗೆಯ್ದುರ್ಬುತಂ ಕೊರ್ಬುತಂ (ಪದ್ಮರಾ. ೫-೫೩). ೪. "ಜಂಘತಿ – ಕೊರ್ಬಿದಪಂ" (ಕಾಶಕ್ಕ. ೬೬); ಮದ್ಯಮಂ ಸಲೆ ಕುಡಿದು ಕೊರ್ಬನೆಯುವಂ (ಪದ್ಮರಾ. ೧೧-೬೪).

[ದೇ. ॥ ತಮಿ. ಕೊಳುಪ್ಪು; ತುಳು. ಕೊಬ್ಬು; ತೆಲು. ಕ್ರೊವ್ವು, ಕೊವ್ವು]

**ಕೊರ್ವು$_2$, ಕೊಬ್ಬು$_2$, ಕೊರ್ಬು$_2$, ಗೊಬ್ಬು$_2$** (ನಾ). ೧. ಹೆಚ್ಚಳ, ಆಧಿಕ್ಯ; ಸಮೃದ್ಧಿ: ಪುರ್ದಿನ ಕೊರ್ವು ಕರ್ವುವಿಲ್ಲಂ ಕೀಳ್ಮಾಡೆ (ಗಿರಿಕ. ೨-೧೦೫ ವ); ಪೂರ್ವಕರ್ಮಾರ್ಜಿತ ಭವಂಗಳ ಕೊರ್ವನಡಗಿಪ ಮಗನೆ ಬಾರಾ (ಬಸಪು. ೨೪-೩೬); ಮೊಳೆಯಿಡುವಗೆಯ ನೆಡುವ ನೀರೂಡುವ ಕಳೆಗೀಳ್ವ ಕೊಬ್ಬನಗ್ಗಿಸುವ ಬೆಳೆಗಾಯ್ವ . . . ಪಾಮರೀಜನ (ಶ್ರೀಪಾಲ. ೧-೪೮); ತೋಳ್ವಲದ ಕೊರ್ವಿನುರ್ವಿಂದೆಯುಂ (ಮರಾಚ. ೨೮-೧). ೨. ಸೊಕ್ಕು; ಅಹಂಕಾರ; ಮದ: ಬಲ್ಲಾಳಪ್ಪನ ಕೊರ್ವುಂ ಜಡಿದಾಳಾಪಂಗೆಯ್ದು ಕೆಡಿಸಿದಂ ನೃಪಸುತನೇ (ಧರ್ಮಾಮೃ. ೨-೮೮); ತಾರಕ ದನುಜನ ಕೊರ್ವು ಪರ್ವಿತುರ್ವೀತಳಮಂ (ಗಿರಿಕ. ೬-೨); ವಾದಮುಖದಿಂ ಸೋಲ್ತವಂ ಕೊರ್ವನುೞಿದಾತ್ಮಮತದಾಚರಣಮಂ ಬಿಸುಟ್ಟು (ಪದ್ಮರಾ. ೯-೩). **ಕೊಬ್ಬು$_2$**: ೧. ಕೊಬ್ಬಿನಾಳೆಚ್ಚಾಡಿ ತಿಕ್ಕಿದ ಮಂಡಿ ಚಂಡಿಸದೆ (ಕುವ್ಯಾಭೀ. ೪-೧೨); ತಂಬೆಲರ ಕೊಬ್ಬು ಬನಬನದ ಸೌಭಾಗ್ಯಂ (ಚಬಪು. ೪೫-೧೬). ೨. ಜ್ಞಾನದ ಉಬ್ಬು ಕೊಬ್ಬಿನಲ್ಲಿ ಉಲಿವುತ್ತಿಪ್ಪವರೆಲ್ಲರು (ಅವಚಂ. ೧೦೬-೪೮೨); ಅಳಿಬಲವನಂಜಿಸಿದ ಕೊಬ್ಬುಗಳಕಟ ನಮ್ಮೊಡನೆ (ಕುವ್ಯಾದ್ರೋ. ೧೩-೧೦); ಕೂಳು ಕೊಬ್ಬಿಲಿ ಉರಿವವಳ ಗಂಡ ಹೇಳಿದ ಮಾತ ಕೇಳದೆ ಮೀಱುವವಳ (ಪುರಂದ. ೧-೧೪-೨); ಗಬ್ಬಿತನದೆ ಘನಗರ್ವದಿ ಮಲೆವರಾ ಕೊಬ್ಬ ಮುರಿದು (ಸೌಂದರಾ. ೧-೬೧). ೩. ನೆಣ; ಮೇದಸ್ಸು; ಚರ್ಬಿ: ಅಂತು ಕೊಬ್ಬೆಂಬ ಕಿಟ್ಟ ಮುದುರೆ ಪಸುರ್ವಣ್ಣವೆಂಬ ಕಾಳಿಕೆ ಕಟಿಲೆ ವಿರಹಾಗ್ನಿಯಿಂ ಕಾಯ್ಸಿ (ಲೀಲಾವ. ೧೦-೩೬ ವ); ತುಂಡ ಮುಂಡಗಳು ಮಿದುಳು ರೋಹಿತ ಕೊಬ್ಬು ಖಂಡವ ಮನದಣಿ ವನಕ ಉಂಡು (ಮೋಹತ. ೪೦-೬೧). **ಕೊರ್ಬು$_2$**: ೧. ಅಣಂ ಮಱ್ಗುದುರಿವ ಮದನಾಗ್ನಿಯ ಕೊರ್ಬು (ಆದಿಪು. ೯-೫೬); ಇದು ಶರಣರ ಘನತ್ವಂ ದೇವಯಿದು ಭಕ್ತರ ಮಹತ್ವಂ ದೇವಯಿದು ನಿಮ್ಮವರ ನಿತ್ಯತ್ವದ ಸಿರಿಯ ಕೊರ್ಬು (ಸಾನಂಚ. ೮-೨). ೨. "ಕದಃ – ಕೊರ್ಬು" (ಕಾಶಕ್ಕ. ೨೩). **ಗೊಬ್ಬು$_2$**: ೨. ಎದ್ದು ಹೊಡಿಯುದಕ ಗೊಬ್ಬು ನಿನ್ನಲ್ಲುಂಟು (ಲೋಕಗೀ. ೧೩೫). [< ಕೊರ್ವು$_1$]

**ಕೊರ್ವುವಡೆ, ಕೊರ್ಬುವಡೆ** (ಕ್ರಿ). ಹೆಚ್ಚಾಗು; ಕೊಬ್ಬು; ಬಲಿ: ವಿದೇಹಿಗದೇಂ ಪೃಥು ಕುಚಯುಗದೊಡನೆ ಕೊರ್ವು [ಪಾಠಾಂ. ತೋರ್ಪು]ವಡೆದುದೊ ಮಧ್ಯಂ (ಪಂರಾಮಾ. ೪-೨). **ಕೊರ್ಬುವಡೆ**: ಸೂಕ್ತಿಸುಧಾಪ್ರವಾಹದೊಳ್ ಕೊರ್ಬುವಡೆದು (ಕುಸುಮಾ. ೧೫-೮೯).

[ಕೊರ್ವು$_2$ + ಪಡೆ$_1$]

**ಕೊಲ್$_1$**, ಕುಲ್ಲು$_1$, ಕೊಲು, ಕೊಲ್ಲು (ಕ್ರಿ). ಕೊಂದ (ಭೂತಕೃ). ೧. ಸಾಯಿಸು; ಪ್ರಾಣ ತೆಗೆ; ವಧೆಮಾಡು: ಈ ಧರ್ಮಕ್ಕೆ ಬಕ್ರ ಬಕ್ಕೊಂ ಬಾರಣಾಸಿಯುಳ್ ಸಾಸಿರ್ವರ್ ಪಾರ್ವರುಂ ಸಾಸಿರಂ ಕವಿಲೆಯಂ ಕೊನ್ದ ಪಾತಕನಕ್ಕೆ (ಮೈಆರ್. ೧೯೩೬, ೫೩-೫೫; 550); ಕೊಲ್ಲದುದೆ ಧರ್ಮಮೆಂದಿಂತು ನಂದಿ (ವಡ್ಡಾರಾ. ೧೧-೨೬); ಕೊಲ್ಲೆಂ ಬಿಸುಡಾ ಯುಧಮಂ ಪುಲ್ಲಂ ಕರ್ಚು (ಕವಿರಾ. ೩-೨೦೦); ಗರ ಮುಟ್ಟೆ ಕೊಲ್ಲುಗುಮಿದು ನಿಜ ವಿರೋಧಿಯಂ (ಪಂಪಭಾ. ೧-೧೦೩); ಕೊಲಲ್ಬರ್ಗಂಗಿದಿರ್ಪೋದ ರೆಂಬಂತೆ (ಧರ್ಮಾಮೃ. ೨-೧೯೯). ೨. ಪೀಡಿಸು; ನೋಯಿಸು; ಹಿಂಸೆಮಾಡು: "ಕೊಲ್ – ಹಿಂಸಾಯಾಂ" (ಶಮಧಾ); ಎಲೆ ಚಂದ್ರಹತಕ ಮದನನ ಬಲದಿಂದಂ ಮೇಲೆವರಿದು ಕೊಂದಿಂತೆನ್ನಂ ನಿಲಲಱಿಯೆ (ಕಾದಂಉ. ೬೧೨); ಅಯಂಗಿಡೆ ಕಾಮಂ ಕೈಗಾಯದೆ ನಿಂದಾದರ್ ಮುಚ್ಚಿ ಕೊಂದಪನ್ (ಧರ್ಮಾಮೃ. ೩-೧೬೮). **ಕುಲ್ಲು$_1$**: ೧. ಆತ್ಮಜರುಗಳ ಬೇಗೆಯಲಿ ಕುಲ್ಲುತಲಿ ತಾಮುನ್ನ ಬದುಕಿದುದೆಲ್ಲವನು ನೆನೆಯುತ್ತ (ಪ್ರಹ್ಲಾಚ. ೪-೫೪); ನಾಚಿಕೆಯನ್ನೂ ಹೊಟ್ಟೆಯುರಿಯನ್ನು ಅನುಭವಿಸಿ ಕುಲ್ಲುವುದು (ಸಾಹಿಜೀ. ೮೩). **ಕೊಲು**: ೧. ಕೊಲುವಂ ಗೆಲುವಂ ಕಲಿ ನರಸಿಂಹಂ (ಮೈಆರ್. ೧೯೩೦, ೧-೨೮; 1173 ?); ಕಳಬೇಡ, ಕೊಲಬೇಡ (ಬಸವ. ೨೩೫); ಶಿಶುವನಿಱಿವರೆ ಪಶುವಂ ಕೊಲುವರೆ (ಬಸರ. ೪-೩೬); ಕೊಲುವವೈ ಕಾಗೆಗಳಕಟ ಕೋಗಿಲೆಯ ಮಱಿಯನು (ಕುವ್ಯಾಸ. ೧೪-೧೨೨); ನಿದ್ರಾಭರದೋಳ್ದರ ಕೊಲು ವುದುಚಿತವೆ (ಸಳಹ. ೨-೨೦). ೨. ಕೊಲುವಾ ಕೂಟವು ನಷ್ಟವಪ್ಪ ಕೆಲಸಂ ... ಫಲದ ಭ್ರಾಂತಿಯ ಕೋರ್ಪುದೈ (ಸೋಮೇಶ. ೨೩). ೩. ಹಾಳುಮಾಡು; ವ್ಯರ್ಥವಾಗಿ ಕಳೆ: ಎಲೆ ಯುಧಿಷ್ಠಿರ ಬಿಲ್ಲ ಹಿಡಿ ನರಹುಳುಗಳೆವದಿರ ಕವಿಸಿ ಕಾಲವ ಕೊಲುವುದೇ ಸಾಕಿನ್ನು ಕೈವಶವಾದೆ ನಿಲ್ಲೆನುತ (ಕುವ್ಯಾದ್ರೋ. ೨-೪೩). **ಕೊಲ್ಲು**: ೧. ಕಲ್ಲ ನಾಗರ ಕಂಡರೆ ಹಾಲನೆಱೆಯೆಂಬರು, ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯ (ಬಸವ. ೧೯೪); ಚನ್ನಮಲ್ಲಿಕಾರ್ಜುನಯ್ಯ ಕೊಲ್ಲು ಕಾಯಿ ನಿಮ್ಮ ಧರ್ಮ (ಮಹಾದೇ. ೨೨); ಎನ್ನುವಂ ಪತಿ ಕೊಂಯೊಡಂ ಕೊಲ್ಲಲಿ (ಬಸಪು. ೧೩-೨೫); ಆಹವದೊಳು ನಿನ್ನ ಕೊಲ್ಲುವ ಕ್ರೂರ ಬಂದಪನು (ಮೋಹತ. ೨೧-೩೮). ೪. ಹೊಡೆ; ಪೆಟ್ಟುಕೊಡು: ಕಾಲು ತಂದು ಕೇಲಿನೊಳಗೆ ಅದ್ದಿ ಪೋದನಮ್ಮ ಕೋಲ ತಂದು ಕೊಲ್ಲ ಹೋದರೆ ಅಮ್ಮ ಲೀಲೆಯಿಂದ ಓಡಿಪೋದನಮ್ಮ (ಪುರಂದ. ೫-೫೦-೧); ವಿಶ್ವಾಮಿತ್ರಗಂ ನಾರಿಯುರು ಮೊರೆಯಿಡಲ್ ಮಕ್ಕಳಂ ಕೊಂದುದಕೆ ಕ್ರೂರವಮುನಿ ಕೋಪಮಂ ತಾಳ್ದು (ತುರಂಗ. ೬೨-೨೩).

**ಕೊಂದಾಟ** = ೧. ಕೊಲ್ಲುವಿಕೆ; ಕೊಲೆ: ಕೊಂದಾಟಪಾಂ ಧೂಮಮಂ ನಿಪುಣರ್ ಕಂಡರೆ ಪೋಗರ್ಪೈ (ಸೋಮೇಶ. ೬೮). ೨. (ಪಗಡೆ ಮೊದಲಾದ ಆಟಗಳಲ್ಲಿ) ಕಾಯಿಯನ್ನು ಹೊಡೆ ಯುವುದು, —ಕೊಲ್ಲುವುದು: ಕೊಂದಾಟವುಂಟು ಪಗಡೆಯೊಳು (ಶಾಂತೀಶ. ೬-೯). **ಕೊಂದಾಡು** = ಬಡಿದಾಡು; ಹೊಡೆದಾಡು: ಮುಂದಾದ ವರ್ಣವ ಹಿಂದಾದುದೆಂಬಾಗ ಕೊಂದಾಡದಿಹರೆ ಕರ್ಮಿಗಳು (ಭರಚ. ೬೧-೧೫). **ಕೊಂದಿಕ್ಕಿಸು** = ಕೊಂದುಹಾಕಿಸು; ಸಾಯಿಸು: ಜೊಹೋ ಕೊಂದಿಕ್ಕಿಪಂ, ಪುಕ್ಕಿಪಂ (ಎಕ. VIII, ಸಾಗರ. ೧೦೯-೩೦; 1049). **ಕೊಂದಿಕ್ಕು** = ಕೊಂದುಹಾಕು; ಸಾಯಿಸು: ಲಂಪಳರಪ್ಪಮ್ಮಂದಿಗರಂ ಬಗೆವಂದದೆ ಕೊಂದಿಕ್ಕುವೆ ಸಕಳವಿಷಯ ವಿಷಮ ವಿಷಂಗಳ್ (ಆದಿಪು. ೪-೬೩); ಮುನಿದಿರ್ದ ತ್ತೊಂದು ಸೂಟ್ ಕ್ಷತ್ರಿಯರನಱಿ ಕೊಂದಿಕ್ಕಿದಾ ರಾಮನಿಂದಿತ್ತ ನರೇಂದ್ರರ್ ಪೊಕ್ಕರಿಲ್ಲೊ ಬರ್ಗರುಂ (ಗದಾಯು. ೧-೨೮); ಪೇಸದೆ ಪಾರ್ವ್ವರಂ ಗೊರವರಂ ಗೋಬೃನ್ದಮುಂ ಪೆಣ್ದಿರಂ ತವೆ ಕೊನ್ದಿಕ್ಕಿದ ಪಾಪಮುಯ್ದುಗುಂ (ಸೌಇಇ. XI-i, ೮೪-೩೩; 1049). **ಕೊಂದುಕೂಗು** = ಕೊಂದು ತಿನ್ನು; ತಿಂದುತೇಗು: ಇಟ್ಟಳಮಾಯ್ತುರ ಚಲ್ಲಿ ಕೊಂದು ಕೂಗಿತು ಕಟಿಚಲ್ಲಿ (ಕಾವ್ಯಾವ. ೬೧); ನಟ್ಟು ಪರಗು ವುದುಂ ಕೊಂದು ಕೂಗುವುದುಂ ತಿಂದುತೇಗುವುದುಂ (ಸುಕುಮಾ. ೧೧-೪೭ ವ); ಅಗ್ಗಳ ಮನೆ ಕೊಂದುಕೂಗುವನರಾತಿಬಳಂ ತಲೆದೋಱೆ ಬವ್ವಿಗಂ (ಸೌಇಇ. XX, ೭೩-೩೩; 1118); ಮನಸಿಜನ ಮಾಯೆ ವಿಧಿ ವಿಳಸನದ ನೆರಂಬಡೆಯೆ ಕೊಂದು ಕೂಗದೆ ನರರಂ (ಯಶೋಚ. ೨-೬೧).

[ದೇ. ‖ ತಮಿ. ಕೊಲ್; ಮಲ. ಕೊಲ್ಲು; ತೆಲು. ಕೊಲ್ಲು; ಕೊಡ. ಕೊಲ್ಲ್]

**ಕೊಲ್$_2$** 'ಕೋಲ್$_3$' ನೋ.

**ಕೊಲ್$_3$** (ನಾ). ಕೋಲು; ಗಣೆ; ಗಳೆ. 'ಕೊಲ್ಲಟಿಗ' ಪರಾ. [< ಕೋಲ್$_1$]

**ಕೊಲ$_1$** (ನಾ). ಒಂದು ಸ್ಥಳದ ಹೆಸರು (?): ಶ್ರೀಮತ್ ಗಂಗೆಗೊಂಡ ರಾಜೇಂದ್ರ ಚೋಳದೇವರ್ ಪ್ರಿಥಿವೀ ರಾಜ್ಯಂಗೆಯ್ಯುತ್ತಿರೆ ಕೊಲದ ಮುನಿವರಾದಿತ್ಯಕಾಯ್ವರಾದಿತ್ಯ ಚೆಲ್ವರಸರ ಮಗ (ಎಕ. X, ಬಂಗಾರು. ೧೫೩-೩; 1000). [?]

**ಕೊಲ$_2$** (ನಾ). ೧. ಕುಲ; ವಂಶ: ಆ ಕೊಲದೊಳೊರ್ವ್ವ ಪದ್ಮಿನಿ ಲೋಕೋನ್ನತ ಪುಟ್ಟಿಲಱಿದು (ಕಇ. I, ೨೫-೫೦; 1186); ತೇಕಲ ಸೀಮೆ ವೊಳಗಣ ಉಳ್ಳಿಯರ ಹಳ್ಳಿ × ಈ ಕೊಲದ ತಂದಿಗೆ ಸರ್ವಮಾನ್ಯದ ಭಟ ವೃತ್ತಿಯಾಗಿ ಕೊಟ್ಟೆಉ (ಎಕ. X, ಮಾಲೂರು. ೩೫-೫; 1525). ೨. ಗುಂಪು; ಸಮೂಹ: ಮೃಗಮಾರಣಮಿಲ್ಲದಲ್ಲಿ ಯೆಲ್ವಿನ ಕೊಲ್ಲ ಮಿಲ್ಲದಲ್ಲಿ ... ಶಬರಂ ಸುಖಮಿರ್ಪಂ (ಅರ್ಧನೇ. ೩-೭೭). [< ಸಂ. ಕುಲ]

**ಕೊಲಂಬಾಬೇರು** (ನಾ). ಒಂದು ಬಗೆಯ ಮೂಲಿಕೆ: (ಮೃಶಿಗ. ೪೭-೯೪೨). [?]

**ಕೊಲಜ** (ನಾ). ಒಳ್ಳೆಯ ಕುಲದಲ್ಲಿ ಹುಟ್ಟಿದವನು; ವಂಶಜ: ಕೈಲನಲ್ಲದೆ ಪೆಜನಾಪೊಂ ಪಿಕ್ಕಿ ನೋಱ್ದೋರ್ತಲೆಗೊಲ [ಪಾಠಾಂ. ಗೋ]ಜಂ (ಕಾವ್ಯಾವ. ೨೧೧); ಒಡಿಪೊಡಿಸಿ ಅರಮನೆ ಪುಗುವರಾ ಅಟ್ಟೆ ಅಳ್ಕನ್ ಕೊಲಜರ ಮುಗಸುಂಗೆಯೊಳ್ವುವನ್ ಸ್ವಾಮಿಘಾತಕರ ದೆನ್ನಮ್ಪೊಱೊನ್ (ಸೌಇಇ. IX-i, ೧೬-೨೦; ?). [< ಸಂ. ಕುಲಜ]

**ಕೊಲಜೆ** (ನಾ). ಒಳ್ಳೆಯ ಕುಲದಲ್ಲಿ ಹುಟ್ಟಿದವಳು; ಕುಲೀನೆ: (ಶ). [< ಕುಲಜೆ]

**ಕೊಲತ್ತೂರ್** (ನಾ). ಒಂದು ಊರಿನ ಹೆಸರು: ತಕೋತ್ತರೇ ಉತ್ತಗ್ರಾಮಸ್ಯ ಕೊಲತ್ತೂರ್ನಾಮ ಗ್ರಾಮಸ್ಯ (ಎಕ. X, ಮುಳಬಾ. ೧೫೭-೩೮; 338 ?). 'ಕೊಳತ್ತೂರ್' ಪರಾ. [? + ಊರ್]

**ಕೊಲದುಗದ್ದೆ** (ನಾ). ಒಂದು ಬಗೆಯ ಗದ್ದೆ (?): ಎರೆಗಟ್ಟಿ ಸ್ಥಳದಲು ಮಾನ್ಯವಾಗಿ ಕೊಲದುಗದ್ದೆ ಖ ೧ (ಎಕ. XVI, ಚಿಕ್ಕನಾ. ೧೦೩-೧೨; 1589). [ಕೊಲದು ? + ಗದ್ದೆ (< ಗಟ್ಟೆ)]

**ಕೊಲಾರಿ** 'ಕೊಲ್ಲಾರ' ನೋ.

**ಕೊಲಿಕೆ**, ಕೊಳಿಕೆ (ನಾ). ಕೊಂಡಿ; ಕುಣಿಕೆ: (ಶ). **ಕೊಳಿಕೆ**: ದ್ವಿತೀಯಾಕ್ಷರ ಪ್ರಾಸವೆಂಬುದು ಕೋಕೆಯುಳ್ಳ ಸರಿಗೆ (ಸಂಶೋಧ ೧೨೩).

[ದೇ. ‖ ತಮಿ. ಕೊಳುಕ್ಕಿ; ತುಳು. ಕೊಲಿಕೆ; ತೆಲು. ಕೊಲಿಕಿ, ಕೊಲ್ಕಿ]

**ಕೊಲಿಗನ್** (ನಾ). (?): ಪಟ್ನ ನನ್ನಿ ಕೊಱಿಯ ಮೂಡ್ಯೆ ಕಡೆಗೋಡತ್ತಿ ಬಲಗ್ಯೆ ನಡದು ಕಲ್ಮಲರುಳ ಕೊಲಿಗನ್ಮೇಲ ಕಾರಜಿಎ ಇಟ್ಟಗೆ ಸೊಜಎ (ಎಕ. X (s), ಚಿಕ್ಕಬ. ೬೬-೨೦; 850). [?]

**ಕೊಲಿಗನ್ನೈಱೆಕ್ಕಾಲು** (ನಾ). ಒಂದು ಕ್ಷೇತ್ರದ ಹೆಸರು: ಕೊಕಂದಿಯುಂ ಮಯಿಲುರಗಯುಂ ಮೇಲ್ವಾಳುಂ ಪಾದಿಗಾಲು ಕೊಲಿಗನ್ನೈಱೆಕ್ಕಾಲು ಬನ್ದು ತೋಟ್ಟಮುಂ ಅಱು ಕಳನಿಲುಂ (ಮೈಅರಿ. ೧೯೨೫, ೧೦೬–೧೯ ; ?). [?]

**ಕೊಲಿಗೆ** (ನಾ). ಒಂದು ಬಗೆಯ ಭತ್ತ (?): ಮುಳಲಿ ಖಂ ೫ ಮೊರಹಳ್ಳಿ ಖಂ ೧೬ . . . ಕೊಲಿಗೆ ಖಂ (ಎಕ. VIII, ತೀರ್ಥಹ. ೧೯–೧೧೦ ; 1573). [?]

**ಕೊಲಿಮೆ, ಕುಲಮೆ, ಕುಲಿಮೆ, ಕುಲುಮೆ, ಕೊಲುಮೆ** (ನಾ). ಅಕ್ಕಸಾಲಿಯ ಅಥವಾ ಕಮ್ಮಾರನ ಒಲೆ: ಮದಗಿನ ಮಣ್ಣ ಮೇಗೆ ಬನ್ದು ಕೊಲಿಮೆಗೆ ಒಕ್ಕಂಣ್ಣಾಗ ಮಣ್ಣು (ಸೌಇಇ. IX–i, ೧೮–೧೯; 884). **ಕುಲಮೆ**: (ಅ). **ಕುಲಿಮೆ**: ಗಾದೆ ಅನುಭವದ ಕುಲಿಮೆಯಲ್ಲಿ ಕಾಯ್ದು ಬಂದ ಚಿನ್ನದ ಚೂರು (ರೂಪಸಂ. ೫೯). **ಕುಲುಮೆ**: ನಗುತೆಲ್ಲವಂ ತಂದು ಕುಲುಮೆಯುಕ್ಕಿ (ಗುರುಚಾ. ೧೩–೭೫) ; ಸರ್ವನಾಶದ ಕುಲುಮೆಯಲ್ಲಿ ಅವಳ ಜ್ಞಾನೇಂದ್ರಿಯಗಳೆಲ್ಲಾ ಸುಟ್ಟುಹೋಗಿ ದೊಂಬೆ ಮಾತ್ರವಾಗಿದ್ದಳು (ಮಗಮಾಂ. ೧೨೪); ಮತ್ತೆ ಮತ್ತೆ ವಿಚಾರದ ಕುಲುಮೆಗೆ ಹಾಕಿ ಕಾಸಿ ಬಡಿದು (ಕಗದ್ಯ. ೧೫೩). **ಕೊಲುಮೆ**: ಕಬ್ಬಿಣದ ಕೊಲುಮೆಯೊಳು ಇಕ್ಕಿ . . . ಕಾಸಿ (ಜ್ಞಾನಸಿಂ. ೬–೧೨) ; ಶಂಖವನ್ನು ಕೊಲುಮೆಯಲ್ಲಿ ಮೂರು ಮೂರು ಬಾರಿ ಕಾಸಿ (ಎನ್ಕೈವಿ. ೫೦).
[ದೇ. ‖ ತುಳು. ಕೊಲಮೆ ; ತೆಲು. ಕೊಲಿಮಿ]

**ಕೊಲಿಸು, ಕೊಲ್ಲಿಸು** (ಕ್ರಿ). ೧. ಕೊಲ್ಲುವಂತೆ ಮಾಡು ; ಸಾಯಿಸು ; ಕೊಲೆಮಾಡಿಸು: ಕಳಿಪಂ ಕಳ್ವನಗುರ್ವು ಪರ್ವೆ ಕೊಲಿಪಂ ಕೊಲ್ವಂ ಎನಿಪ್ಪ ಪಾಪಿಯುಂ (ಆದಿಪು. ೫–೮೧); ಕಳಕಜನನಿಂತು ಕೊಲಿಸಿದ ಖಳನೆಗಡಂ ಧರ್ಮನಂದನಂ (ಗದಾಯು. ೩–೨೬) ; ಈ ಪಾತಕಿಯ ಮಾತಂ ನಂಬಿದೋಷಿಯಲ್ಲದನಂಕೊಲಿಸುವುದುಧರ್ಮವಲ್ಲ(ಪಂಚತಂ.೭೯–೧೩); ಲಲನೆಗೋಸುಗಹೆತ್ತಮಗನನು ಕೊಲಿಸಿದ್ಯೆ ಹಾ ಪಾಪಿ(ಕೌಶಿರಾ.೩೭–೨); ಕೊಂಡೊಯ್ದು ಕೊಲಿಸು [ಪಾಠಾಂ. ಬಡಿಯು]ವರ ಕೊಂಡಾಡುತಿರಬೇಡು (ಪುರಂದ. ೨–೭೫–೩). **ಕೊಲ್ಲಿಸು**: ೧. ಸಂಪತ್ತಿನಾಸೆಗಾಗಿ ತನ್ನ ಅಣ್ಣತಮ್ಮಂದಿರನ್ನು ಕೊಲ್ಲಿಸುವುದೂ (ಧರ್ಮಸಾ.೨೩). ೨. ಹೊಡೆಯಿಸು; ಬಡಿಯಿಸು ; ಹಿಂಸಿಸು: ಸ್ತ್ರೀಯರಾಡಿದಕೆ ಕೋಪಮಂ ತಾಳ್ದು ಕೊಲ್ಲಿಸಿ ಕೊಲೆಯ ಕೂಡೆ ಪೊರವಡಿಸಲು (ತುರಂಗ. ೩೨–೨೨).

**ಕೊಲಿಸಿಕೊಳ್** = ಕೊಲೆಗೆ ಗುರಿಯಾಗು; ಸಾವನ್ನು ತಂದುಕೊಳ್ಳು: ಪಶುಗಳ ಮಯ್ಯೊಳೆನಿತು ರೋಮಮುಂಟನಿತು ಬಾರಿ ತಾಂ ಕೊಲಿಸಿಕೊಂಬಂ (ಪಂಚತಂ. ೬೨–೧೩). [ಕೊಲ್$_1$ + –ಇಸು$_3$]

**ಕೊಲು** ‘ಕೊಲ್$_1$’ ನೋ.

**ಕೊಲುಕುಟಿಕನಗಿಡ** (ನಾ). ಕೋಳಿಕುಟುಮನ ಬಳ್ಳಿ: (ಅ).
[ಕೊಲುಕುಟಿಕ + ಗಿಡ$_1$ (< ಗಿಡು)]

**ಕೊಲುಮೆ** ‘ಕೊಲಿಮೆ’ ನೋ.

**ಕೊಲ್$_1$** (ಕ್ರಿ). ಕೊಲ್ಲು ; ಸಾಯಿಸು ; ವಧೆಮಾಡು: ಖರದೂಷಣರ್ ಮೊದಲಾಗೆ ಕೊಲೆದನ್ ಚತುರ್ದಶ ಸಹಸ್ರರಂ (ಶ್ರೀರಾಮಾ. ೫೫೪–೫೯).
[< ಕೊಲ್$_2$]

**ಕೊಲ್$_2$** (ನಾ). ೧. ಕೊಲ್ಲುವಿಕೆ; ವಧೆ: ಇದಾನ್ ಅಱಿತ್ತೊನ್ ಬಾರಣಾಸಿ ಏಱು ಕವಿಲೆ ಕೊನ್ದ ಕೊಲೆಯ್ದುವೊನ್ (ಎಕ. XIV, ತಿರುಮ. ೨೩೪–೯ ; 8ನೆಯ ಶತ); ಕೊಲೆಯೊಳ್ ಪೊರೆಯಿಲ್ಲದ ಪರಲಲನೆಗೆ ಬಗ್ಗೆಗುಡದ (ಶಾಂತಿಪು. ೧–೮೮); ಕವರ್ತೆಯ ಮೇಲೆ ಕೊಲೆಯೆಂಬಂತೆ (ಧರ್ಮಾಮೃ. ೮–೧೬೧) ; ತನ್ನಯ ಕೊಲೆಗೆ ಮಗನಳಿವೊಂದು ಸಾಲದೆ ತನ್ನ ನುಡಿಯೇಳಿ (ಕುವ್ಯಾದ್ರೋ. ೬–೧೯). ೨. ಹಿಂಸೆ; ಪೀಡೆ; ತೊಂದರೆ: ವಾಸುದೇವನ ತಲೆಯ ಮೇಲೆ ಅದೆಂತಹ ಕೊಲೆ ಬಂದು ಕುಳಿತಿತೋ . . . ತಿಳಿಯಲೇ ಇಲ್ಲ (ಮೂರುದಾ. ೧೨೮). [ದೇ. ‖ ತಮಿ. ಕೊಲೈ ; ಮಲ. ಕೊಲ್ಲಿ]

**ಕೊಲ್$_3$** (ನಾ). (?): ತ್ರಿಸನ್ಧಿಯ ಕೊಲೆ ಚಣ್ಣಗಾಲೆ (ಎಕ. I, ೧–೨೫ ; 466). [?]

**ಕೊಲೆಕೋಡು** (ನಾ). ಕೊಲ್ಲುವ ಕೋಡು; ಸಾಯಿಸುವ ಕೊಂಬು: ಅವರನ್ನು ನಿಸ್ನಾನೆಯ ಕೈಯ ಕೊಲೆಕೋಡುಗಳಿಱಿತ ಕಾಲ್ಗಳ ಬಡಿತಂಗಳಿಂದ ಲಯವನ್ನೈದಿಸು ಪೋಗೆಂದು (ಕಗವಿ. ೪೯–೧೬ ; ವಿಪ್ಲವ).
[ಕೊಲೆ$_1$ + ಕೋಡು$_6$]

**ಕೊಲೆಕೋಣೆ** (ನಾ). ಕೊಲ್ಲುವ ಕೋಣೆ: “ಯಾತನೆಯಿಲ್ಲದೆ ಪ್ರಾಣಿಗಳನ್ನು ಕೊಲ್ಲುವ ಕೋಣೆ; ಕೊಲೆಕೋಣೆ” (Lethal Chamber. ಇಂಕನಿ).
[ಕೊಲೆ$_1$ + ಕೋಣೆ]

**ಕೊಲೆಗ** (ನಾ). ಕೊಲೆ ಮಾಡುವವನು ; ಕೊಲೆಗಡಿಕ: “ಅಂತಕಃ, ಅಂತಮಾನಃ –ಈ ೨ ಕೊಲೆಗಂ” (ಕಾಶಕ್ಯ. ೯೭) ; ಓ ಕೊಲೆಗ ನಾನಿರೆ ನಿರ್ನೆರಂ ನಿಮ್ಮನೇನೆಂದು ಪಱೆವನೋ (ರಾಮಾಶ್ವ. ೨೯–೭).
[ಕೊಲೆ$_1$ + –ಗ$_3$]

**ಕೊಲೆಗಡಕ** ‘ಕೊಲೆಗಡಿಕ’ ನೋ.

**ಕೊಲೆಗಡಿಕ, ಕೊಲೆಗಡಕ, ಕೊಲೆಗಡಿಗ, ಕೊಲೆಗಡುಕ** (ನಾ). = ಕೊಲೆಗ: ಕೊಲೆಗಡಿಕನಿದಿರಲಿ ಕೆಚ್ಚುಮನದವರಾರು (ಕುವ್ಯಾದ್ರೋ. ೨–೭೬) ; ಇಳೆಯ ಪಾರ್ಥಿವರದಟು ಕೊಡಲಿಯ ಕೊಲೆಗಡಿಕಗದು ಸೊಗಸೆ (ತೊರರಾ. ೧–೧೭–೩) ; ವ್ಯಾಘದಲ್ಲಿ ಕೊಲೆಗಡಿಕರುಪಹತಿಗೈವ ಸಮಯದಲಿ (ನಿಧಾಗ. ೧೧–೩–೯). **ಕೊಲೆಗಡಕ**: ಮೂಲ ಕೊಲೆಗಡಕನು ಸಿಗದುದರಿಂದ ಖಟ್ಲೆ ನಿರ್ಜೀವವಾಯಿತು (ಜಮಾನ್ದಾ. ೧೫೯) ; ಕೊಲೆಗಡಕರನ್ನು ಕರೆಸಿ ಜನಕ ದಶರಥರೀರ್ವರನ್ನು ಕೊಂದು ಬರುವಂತೆ ಆಜ್ಞಾಪಿಸುವನು (ಸಾಹಿಸ. ೮೬). **ಕೊಲೆಗಡಿಗ**: ಕೊಲೆಗಡಿಗ ಕಂದರ್ಪಕನ ಕೂರಲಗೋ (ಕುವ್ಯಾವಿ. ೨–೯); ಕೊಲೆಗಡಿಗನಿದಿರಾದನಾ ಕುಂಭಾನುಜನ ರಣಕೆ (ತೊಕರಾ. ೬–೩೯–೨); ಕೊಲೆಗಡಿಗ ಚಂಡಾಲರುಗಿದ ಕೈದುಗಳಿಂದೆ . . . ಇಱಿದು ಕೆಡಹಿದೊಡೆ (ಜೈವಿಭಾ. ೩೧–೪೭). **ಕೊಲೆಗಡುಕ**: ಎಲೆಲೆ ಬೆಂದುದು ಲೋಕ . . . ನಿಲಿಸು ನಿಲಿಸೀ ಮೂರ್ಖಕಮಲಜನ ಕೊಲೆಗಡುಕಸರವನೆಂದಲ್ಲಲ್ಲಿ ಗುಜುಗುಜಿಸೆ (ಚಬಸು. ೧೬–೨೮). ‘ಕೊಲೆಗಡುಕತನ’ ಪರಾ. [ಕೊಲೆ$_1$ + ಕಡಿಕ$_2$]

**ಕೊಲೆಗಡಿಗ** ‘ಕೊಲೆಗಡಿಕ’ ನೋ.

**ಕೊಲೆಗಡುಕ** ‘ಕೊಲೆಗಡಿಕ’ ನೋ.

**ಕೊಲೆಗಡುಕತನ** (ನಾ). ಕೊಲೆಗಾರನ ಸ್ವಭಾವ, —ವೃತ್ತಿ: ಲಾಲಿಸದೆ ಕುಲಛಲವ ನೀತಿಯ ಪಾಲಿಸದೆ ಕೊಲೆಗಡುಕತನದೊಳು ಮೇಲುಗಾಣದೆ ಬಂಧುಗಳ ಗುರುಗಳ ಸಹೋದರರ ಕೋಲವೊನೆಯಲಿ ಕೊಂದು (ಕುವ್ಯಾಭೀ. ೩–೪೨). [ಕೊಲೆಗಡುಕ(<ಕೊಲೆಗಡಿಕ) + –ತನ]

**ಕೊಲೆಗಯ್ಯ** (ನಾ). ೧. ಕೊಲ್ಲುವ ಕೈಗಳನ್ನುಳ್ಳವನು. ೨. ಕೊಲ್ಲುವ ಸೊಂಡಿಲುಳ್ಳದ್ದು: ಅಯ್ಯಯ್ಯೊ ನೃಪನಳಿದನೀದ ಕೊಲೆಗಯ್ಯನಪ್ಪಾನೆಯೊಳೆಂದು . . . ದಿಯದಿಯುರಲ್ಲಿ ಪುಯ್ಯಲನಿಟ್ಟಳಿದರು (ಶ್ರೀಪಾಲ. ೭–೫೭). [ಕೊಲೆ$_1$ + ಕಯ್$_2$ (< ಕೆಯ್$_2$) + –ಅ$_7$]

**ಕೊಲೆಗಾರ** ‘ಕೊಲೆಗಾಱ’ ನೋ.

**ಕೊಲೆಗಾರ್ತಿ** (ನಾ). ಕೊಲೆಮಾಡುವವಳು; ಕೊಲೆಗಡಿಕೆ: “ಶರ್ವಾಣಿ – ಕೊಲೆಗಾರ್ತಿಯುಂ, ಗೌರಿಯುಂ” (ಕಾಶಕ್ಯ. ೨೪೫).
[ಕೊಲೆಗಾಱ + –ತಿ$_1$ (< –ಇತ್ತಿ)]

**ಕೊಲೆಗಾಜ**, ಕೊಲೆಗಾರ (ನಾ). = ಕೊಲೆಗ: ಕಾಮನು ಕರುಣಯೇ ಕೊಲೆಗಾಜನಿಗೆ (ತೊರರಾ. ೬–೧೨–೪). **ಕೊಲೆಗಾರ**: "ಹಿಂಸಕಃ – ಕೊಲೆಗಾರಂ" (ಕಾಶಕ್ಕ. ೨೩೫); ಒಬ್ಬನ ಕೊಂದವನಾದರೆ ಕೊಲೆಗಾರ (ಇಂಚಾಪ ೨೩೫–೬೧). [ಕೊಲ್ಕೆ + –ಕಾಜ]

**ಕೊಲೆಗುತ್ತ** (ನಾ). ಸಾವನ್ನುಂಟುಮಾಡುವ ರೋಗ; ಮಾರಕ ವ್ಯಾಧಿ: ಮುಂಚೆ ಬಂದ ಸಂಚಿನ ಪ್ರಪಂಚದ ಕೊಲೆಗುತ್ತದ ದೇನೆಗೆ ನರಲ್ವರ್, ಅಜುವಗೆಗಳ್ಗೆ ತಮ್ಮಂ ಮಾಜುಗೊಟ್ಟ ಕೊಳ್ವರ್ (ರಾಮಾಶ್ವ. ೭೮–೮); "ಕೊಲೆಯ ಅಪಾಯ" (ರಾಮಾಶ್ವ. ಕೋಕ). [ಕೊಲ್ಕೆ + ಕುತ್ತ]

**ಕೊಲೆಗೆಲಸ** (ನಾ). ಕೊಲ್ಲುವ ಕೆಲಸ; ವಧೆ: ಜನದ ಕೊಲೆಗೆಲಸದ ನಿರೂಪಕೆ ಮನವ ತಂದಳು ಮೃತ್ಯು (ಕುವ್ಯಾದ್ರೋ. ೬–೩೫); ಮೂಜು ಲೋಕದ ಕೊಲೆಗೆಲಸಕುಬ್ಬೇಜಾದಸಮಾಂಬಕನವೊಲು (ತೊರರಾ. ೪–೬–೧೮); ಸುರಾರಿವಂಶದ ಕೊಲೆಗೆಲಸಕೊಡೆಯನು ನಿರೂಪಿಸೆ (ಶಿಭಾಗ. ೯–೫–೧೦); ಧರೆಯೊಳಾರ್ತರನ್ನೆದೆ ರಕ್ಷಿಸುವ ಬುದ್ಧಿ ಕೋಮಲೆಯ ಕೊಲೆಗೆಲಸಕಾಯ್ತು (ಜೈಮಿಭಾ. ೧೮–೨). [ಕೊಲ್ಕೆ + ಕೆಲಸ]

**ಕೊಲೆಗೇಡಿ** (ನಾ). = ಕೊಲೆಗ: ಮೊಲೆವಾಲನುಣಿಸಿದಾಯಕನ ಪ್ರಾಣವ ಕೊಂದ ಕೊಲೆಗೇಡಿ ಬಲುಹ ಕೋಪಿನಿಗೆ (ಮೋಹಕ. ೪೦–೩೬). [ಕೊಲ್ಕೆ + ಕೇಡಿ]

**ಕೊಲೆಗೈ** (ಕ್ರಿ). ಕೊಲೆಯನ್ನು ಮಾಡು; ವಧಿಸು: ಕೊಲೆಗೈಯೆಂಬುದು ದೆಂಕಣಿಕುಲದೊಳ್ ಚಲಗಯ್ಯಂಬುದು ಜತಿಗಳ ವ್ರತಮಂ ಪಿಡಿವಲ್ಲಿ (ಉದ್ಭದೇ. ೨–೧೩). [ಕೊಲ್ಕೆ + ಗೈ (< ಕೆಯ್$_1$)]

**ಕೊಲೆಗೊಳ್**, ಕೊಲೆಗೊಳ್ಳು (ಕ್ರಿ). ೧. ಕೊಲೆಯನ್ನು ಮಾಡು: ಕೊಲೆಗೆ ಕೊಲೆಗೊಂಡಲ್ಲದೋಡೆಗೆ ನಿಲಲಱಿಯದೀ ಮನವು (ತೊರರಾ. ೩–೬–೩೩). **ಕೊಲೆಗೊಳ್ಳು**: ೨. ಕೊಲ್ಲಿಸಿಕೊಳ್ಳು; ಕೊಲೆಯಾಗು. [ಕೊಲ್ಕೆ + ಕೊಳ್$_1$]

**ಕೊಲೆಗೊಳ್ಳು** 'ಕೊಲೆಗೊಳ್' ನೋ.

**ಕೊಲೆಪಡು** (ಕ್ರಿ). ಕೊಲೆಮಾಡಲ್ಪಡು; ಕೊಲೆಗೆ ಈಡಾಗು: ಈ ಕೊಲೆಪಡುವಾತನರಸರ ಗೋಮಂಡಳಮಂ ಕಾವೊಂ ವೀರಪೂರ್ಣನೆಂಬೊಂ (ವಡ್ಡಾರಾ. ೨೨–೧). [ಕೊಲ್ಕೆ + ಪಡು$_1$]

**ಕೊಲೆಪಾತ** (ನಾ). = ಕೊಲೆಪಾತಕ ೧: ಪ್ರತಿಪಕ್ಷದವರನ್ನು ನಿಂದಿಸುವುದು ಕೊಲೆಪಾತಕ್ಕೆಳಸುವುದು – ಇದು ಎಲ್ಲ ದೇಶಗಳಲ್ಲಿಯೂ ಎಲ್ಲ ಮತಗಳಲ್ಲಿಯೂ ಕಂಡುಬರುವ ಮಾತು (ಸಾಹಿಸ. ೧೯೬). [ಕೊಲ್ಕೆ + ಪಾತ]

**ಕೊಲೆಪಾತಕ** (ನಾ). ೧. ಕೊಲೆಯ ಪಾಪ; ಕೊಂದುದರಿಂದಾಗುವ ಪಾಪ: (ಶಿ). ೨. ಕೊಲೆಗಾರ; ಕೊಲೆಗಡಿಕ: ಇನ್ನು ಗುಂಡು ತಾಕದಲ್ಲಿ ಕೊಲೆಪಾತಕ ಸೋಕದಲ್ಲಿ (ಸೂರ್ಯಪಾ. ೧೧–೫); ಅವರು ಇಡೀ ವಿಶ್ವವನ್ನು ಧ್ವಂಸಮಾಡಿದರೂ ಕೊಲೆಪಾತಕರಲ್ಲ (ಧರ್ಮಸಾ.೧೩೮). [ಕೊಲ್ಕೆ + ಪಾತಕ್ಕ]

**ಕೊಲೆಪಾತಕಿ** (ನಾ). ೧. = ಕೊಲೆಪಾತಕ ೨: ತಾನು ಕೊಲೆಪಾತಕಿಯಾದೆನಲ್ಲಾ ಈ ಪಾತಕವನ್ನು ಹೇಗೆ ಕಳೆದುಕೊಳ್ಳಲಿ? (ಕಂಬಹು. ೩೪); ಏನು ಕೊಲೆಪಾತಕಿಗೆ ಹೆದರುವುದಿಲ್ಲವೇ? (ದೇಶಧು. ೪೬). ೨. ಕೊಲೆಗಾತಿ; ಕೊಲೆಗಡಿತಿ: ಅವಳು ಕೊಲೆಪಾತಕಿ (ರೂಢಿ). [ಕೊಲ್ಕೆ + ಪಾತಕಿ]

**ಕೊಲೆಬಲೆ** (ನಾ). ಕೊಲ್ಲುವ ತಂತ್ರ, —ಜಾಲ: ರಕ್ಕಸರ ಕೈತವದ ಕೊಲೆಬಲೆಗೆ ಸಿಲ್ಕದೋಲೆವ್ಮಮಿತ್ರಂ ಸಾನೆ ರಕ್ಷಣಾವ್ಯೂಹವಮಂ ರಚಿಸಿ ಮೈಗಾವಲಿರ್ಪನ್ (ಶ್ರೀರಾಮಾ. ೬೨೪–೧೮೧). [ಕೊಲ್ಕೆ + ಬಲೆ$_1$]

**ಕೊಲೆಬೀೞ್** (ಕ್ರಿ). ಕೊಲೆಯಾಗು: ಶ್ರೀಮುತ್ತರ ಅತಿರಥಗಣ್ಣ ಪೊಸವಣ್ಣರಮ್ಮಿಬೀಸಿ ತಪ್ಪದೊನ್ ... ಜಯಕೆನಲ್ಲಾ ಕೊಲೆಬೀೞದೊನ್ (ಎಕ. XV, ಅರಸೀ. ೨೧೫–೫; 890). [ಕೊಲ್ಕೆ + ಬೀೞ್$_1$]

**ಕೊಲೆಮನೆ** (ನಾ). ಕೊಲ್ಲುವ ಮನೆ; ಕಟುಕರ ಮನೆ; ಕಸಾಯಿ ಖಾನೆ (?): ಮುಂದೆ ಅಗೆಯಲು ಒಂದು ಕೊಲೆಮನೆ ಕಾಣಿಸಿತು (ಬುದ್ಧಪ. ೭೨). [ಕೊಲ್ಕೆ + ಮನೆ]

**ಕೊಲ್ಗತ್ತಿ** (ನಾ). ಒಂದು ಬಗೆಯ ಖಡ್ಗ: ಮೋಳಗತ್ತಿ ಕೊಲ್ಗತ್ತಿ ಕೊಂಕಣ ಬಿಡಗತಿ ಸೆಳೆಗತ್ತಿ ಮೂಂಮೊಗತ್ತಿ (ದೇವಾಂಪು. ೩–೨೦೧). [< ಕೊಲ್ಕೆ + ಕತ್ತಿ]

**ಕೊಲ್ಚಂದಿಕ್ಕು** (ಕ್ರಿ). ಸರಪಣಿಯಿಂದ ಕಟ್ಟು (?): ದುರದೊಳ್ ಕಾಯ್ದು ಕಡಂಗಿ ಪೊಂಗಿ ಮಲೆದೋರದ್ದಿಭ್ದನೆಯ್ದಂದ ಮಚ್ಚರದಿನ್ದಾ ನ್ತೊರನನ್ತಕಂಗಿಡದೆ ಕೊಲ್ಚನ್ದಿಕ್ಕಿ ಮಿಕ್ಕೀ ವಸುಂಧರೆಯೊಳ್ ತನ್ನದಟುಂ ಪ್ರಕಾಶಮುಮದಾ ರಾಜೋತ್ತಮಂ ಪೆರ್ಚಿರ್(ಎಇ.XVIII, ೧೬೨–೬;985). [ಕೊಲ್ಚು + ಇಕ್ಕು ?]

**ಕೊಲ್ಚು** (ನಾ). ೧. ಗೊಲಸು (?): ಮತ್ತರು ೪೦ ಜೀರ್ಣೋದ್ಧಾರದ ದೆಸಕ್ಕೆ ಕೊಲ್ಚನುಙ್ದ ಮಾಡುವ ಕಲುಕುಟಗವೋಜುಗಳು ನಾಲ್ವರ್ಗೆಂ (ಕಇಆ. ೯–೩–೩೧೩; ?). ೨. ಸರಪಣಿ. 'ಕೊಲ್ಚಂದಿಕ್ಕು', 'ಗೊಲಸು' ಪರಾ. [← ತಮಿ. ಕೊಲುಸು, ಕೊಲುಚು]

**ಕೊಲ್ಲ$_1$** (ನಾ). (ಕರಾ) ಕಮ್ಮಾರ: ಈ ಕತ್ತಿಯನ್ನು ನಮ್ಮ ಮನೆಯ ಸಮೀಪದಲ್ಲಿರುವ ಕೊಲ್ಲ ಮಾಡಿದ (ರೂಢಿ). [ದೇ. ‖ ತಮಿ. ಮಲ. ಕೊಲ್ಲ; ತುಳು. ಕೊಲ್ಲೆ]

**ಕೊಲ್ಲ$_2$** (ನಾ). ಕೊಳ್ಳ (?): ಅಲ್ಲಿಂದಂ ಮೂಡಲು ಕೊಲ್ಲದೊಳಗಣ್ಣ ವಾಮನ ಮುದ್ರೆಯ ಕಲ್ಲೀ ಗಡಿ (ಎಕ. VII, ಶಿವಮೊ. ೭೧–೩೫; 1431). [< ಕೊಳ್ಳ ?]

**ಕೊಲ್ಲಗೆಡಹು** (ಕ್ರಿ). ಕೊಂದುಹಾಕು; ಸಾಯಿಸು: ಕಪೋತನ ಕಾಲ ಪೊಯಿದು ಕೃಷ್ಣನ ಕೊಲ್ಲಗೆಡಹಿ ಪೋಗುತ್ತಿರಲಾಗಿ (ಮೋಳಮಾ. ೧೭೦–೬೭೪). [< ಕೊಲ್$_1$ + ಕೆಡಹು (< ಕೆಡವು$_1$)]

**ಕೊಲ್ಲಗೊಲೆ** 'ಕೊಲ್ಲುಗೊಲೆ' ನೋ.

**ಕೊಲ್ಲಟಗಿತ್ತಿ** 'ಕೊಲ್ಲಟಗಿತ್ತಿ' ನೋ.

**ಕೊಲ್ಲಟ** (ನಾ). ದೊಂಬ; ದೊಂಬ: ನೂಲ್ಗಟ್ಟಿ ಪೊಯ್ದು ಪೊಸ ಗುಡಿಸಲ್ಗಳ್ ತನೆ ನಟ್ಟಗಳಗಳೆಲಿಸಿದ ದೋಳ್ಗಳ್ ... ಇರಲ್ ಬೀಡೆಸೆದುದು ಕೊಲ್ಲಟ ಜನರಾ (ಉದ್ಭಟ. ೫–೧೧೧). [< ಕೊಲ್ಲಟಗ ?]

**ಕೊಲ್ಲಟಿಗ** (ನಾ). = ಕೊಲ್ಲಟ: "ಕೊಲ್ಲಟಿಗನೆಂದು ಡೊಂಬಂ" (ಕಕಸಾ. ೧೮–೬೫೬); ಗೆಲ್ಲ ಸೋಲದ ಮತ್ಸರ ಕೊಲ್ಲಟಿಗಂಗಲ್ಲದೆ ಶಿವಭಕ್ತರಿಗುಂಟೆ (ಚೆನ್ನವ. ೩೬೦); ಅರಿದಾದೊಡಮೇಂ ಕೊಲ್ಲಟಿಗರಾಟ ದಂತಪರಿಮಿತ ತಪಂ ಬಾರದು ಬಲ್ಲರ ಬಗೆಗೆ (ಪಾರ್ಶ್ವಪು. ೧೫–೨೧); ಕೊಲ್ಲಟಿಗರ ಸೂಳೆಯರ ಚಿತ್ರಕಲೆಗಳ ಬಲ್ಲರ ಕೇರಿಗಳೆಸೆದವು (ಸೊಬಸೋ. ೧–೫೧); ಕೊಲ್ಲಟಿಗರಂಗನೆಗೆ ಮುಚ್ಚಿ ತನ್ನಯ ಗುರುವು ಯತಿಮಾರ್ಗ ದೂರನಾಗಿ (ರಾಘಚ. ೫–೩೪). [ಕೊಲ್$_3$ + –ಅಟಿಗ]

**ಕೊಲ್ಲಟಿಗತನ** (ನಾ). ದೊಂಬತನ; ದೊಂಬವಿದ್ಯೆ: ಕುಲ್ಲರಡೆಯ ಲ್ಲೋದಿ ಕೊಂಕ ತಿರ್ದುವನೆಂದು ಕೊಲ್ಲಟಿಗತನದಿಂದಲಪಶಬ್ದಮಂ ಕೂಡಿ (ಲಿಂಗಪು. ೧–೨೨). [ಕೊಲ್ಲಟಿಗ + –ತನ]

**ಕೊಲ್ಲಟಗಿತ್ತಿ**, ಕೊಲ್ಲಟಗಿತ್ತಿ (ನಾ). ದೊಂಬರವಳು; ಡೊಂಬರ ಹೆಂಗಸು: ತಂತಿಯ ಮೇಲೆ ತುದಿಗಾಲಿಟ್ಟು ನಡೆವ ಕೊಲ್ಲಟಗಿತ್ತಿಯಂತೆ (ಗಾಳಿಪ. ೧೦೫). **ಕೊಲ್ಲಟಗಿತ್ತಿ**: ಮಿಣಿಯಲ್ಲಿ ಮಣಿವ ಕೊಲ್ಲಟಗಿತ್ತಿ ತನ್ನ ಜೋಳಿಗೆಯ ತೊಳದಲ್ಲಿ ತೂಗಾಡುವಳು (ಉಯ್ಯಾಲೆ. ೩-೯); ಕಣ್ಣು ಕಟ್ಟಿಕೊಂಡು ಉಯ್ಯಾಲೆಯಿಂದ ಉಯ್ಯಾಲೆಗೆ ಜಿಗಿಯುತ್ತಿರುವ ಕೊಲ್ಲಟಗಿತ್ತಿಯ ಕಾಯಕದಂತೆ (ತುಂಗಭ. ೬೬). [ಕೊಲ್ಲಟಗ + -ಇತ್ತಿ]

**ಕೊಲ್ಲಟಗವೆಣ್** (ನಾ). = ಕೊಲ್ಲಟಗಿತ್ತಿ: ಪ್ರಿಯದಂಡಮೆಂಬ ಗಳೆದುದಿಯ ಮೇಲಾಡುತಿರ್ಪ ಕೊಲ್ಲಟಗವೆಣ್ಣೊ (ಚೆಬಪು. ೧೦-೬೨).
[ಕೊಲ್ಲಟಗ + ಪೆಣ್]

**ಕೊಲ್ಲಡಿಗೆ** (ನಾ). (?): ಹಾರಿನಿರ್ದಪ ಬುತ್ತಿಯು ಕಲ್ಲಿಕೊಲ್ಲಡಿಗೆ ಜೂರಿಮಿಡಿ ವಿಲ್ಲುಕಡೆ ಮದ್ದು ಗಂಟಲ್ಗಾಳ ಕೋಣವೇಡತಿಯರೊಡಗೂಡಿ ಶಬರವ್ರಾತಮಾರಣ್ಯಕೇಳ್ತಂದುದು (ನಂದಿಮಾ. ೧೩-೨೫). [?]

**ಕೊಲ್ಲಣ** (ನಾ). ೧. ವಿನೋದ; ಕ್ರೀಡೆ: ಮೆಲ್ಲಮೆಲ್ಲನೆ ಲಲ್ಲೆಗಱೆವ ಬಲ್ಲಿತನದ ಸೊಲ್ಲಸೊಗದ ಘುಲ್ಲಣೆಯ ಕೊಲ್ಲಣದೊಳೆಸೆದುಂ (ರಾಮಾಶ್ವ. ೬೩-೩). ೨. ಎಡೆಯಾಟ; ಸಂಚಾರ. ೩. ದಟ್ಟಣೆ; ಸಂದಣಿ. 'ಕೊಲ್ಲಣಿಸು' ಪರಾ. [?]

**ಕೊಲ್ಲಣಿಗೆ** (ನಾ). ೧. ಎಡೆಯಾಟ; ಸಂಚಾರ: "ಕೊಲ್ಲಣಿಗೆಯೆಂದು ಎಡೆಯಾಡುವುದು" (ಕಕಸಾ. ೨೩-೪೬೬); "ಕೊಲ್ಲಣಿಗೆಯೆ ಎಡೆಯಾಟಂ" (ಕವಿಕಂ. ೧೯೨); ಕೇವಳಿಸಿದರು ಕೊಲ್ಲಣಿಗೆಯಲಿ ಕೊಂಡರು ಸುವಸ್ತುಗಳ (ಕುವ್ಯಾಸ. ೬-೭). ೨. ದಟ್ಟಣೆ; ಸಂದಣಿ; ನೆರವಿ: ಐರಾವತದ ಕಾಲಾಟಕ್ಕೆಡೆಯಪ್ಪಂತು ಕೊಲ್ಲಣಿಗೆಯೊಳ್ ಬರ್ಪನೇಕ . . . ವಾಹನಂಗಳಂ ತೆರಳೆತೊಳ್ದು ತೆಱಪಂ ಮಾಡಿಯುಂ (ಚಂದ್ರಪ್ರ.೧೨-೮೩ವ); ಕಳಕಳ ರವದ ಕೊಲ್ಲಣಿಗೆಯರಿ [ಪಾಠಾಂ. ಘುಲ್ಲಣಿಯ] ಭಟರ ತಿಂತಿಣಿಯೊಳ್ (ಹಡಕಾ. ೧೩-೫); ಕೋಟಲೆಯ ಕೊಲ್ಲಣಿಗೆಯಲಿ ಮೈನೋಟ ಕಲಸದೆ ದಿಸಲಲಿವರು ಮಹಾಟವಿಯ ಮಧ್ಯವನು ಹೊಕ್ಕರು (ಕುವ್ಯಾಅ. ೮-೯೪); ನಾಟದಾದುದು ಬುದ್ಧಿ ಶುದ್ಧಿಯ ಕೋಟಲೆಯ ಕೊಲ್ಲಣಿಗೆಯಲಿ ಮೇಗೋಟೆಯನು ಹತ್ತಿದನು (ತೊರರಾ. ೫-೨-೨೩); ದಳ್ಳುರಿಯ ಮುತ್ತಿಗೆಯ ಹದಗದ ಹೊಳ್ಳು ನೆರವಿಯೊ ತತ್ವವಿದ್ಯದ ಕೊಲ್ಲಣಿಗೆಗೊಡ್ಡಿಸಿದ ಮಾಯಾಮಯ ತನುಭ್ರಮೆಯೊ (ನಿಭಾಗ. ೧೦-೩೭-೫೩). ೩. ವೇಷ; ಆಟ: ತೊಡೆವಟ್ಟರ್ ಚೋಳಬಾ ಕೊಲ್ಲಣಗೆಲೆ ಕಾಳಿಂಗ . . . ಎನುತೆ ಬೆಸಂದೇಳ್ವರ್ (ಎಕ. VII, ಶಿವಮೊ. ೫-೧೪; 1218). [?]

**ಕೊಲ್ಲಣಿಗೆವರಿ** (ಕ್ರಿ). ಗುಂಪಾಗಿ ನಡೆ; ಸಂದಣಿಸಿ ಹರಿ: ಒಡಲ ಚೆಲುವುಗಳೊಡನೆ ನೋಟಕರ ದಿಟ್ಟಿಗಳು ಬಿಡದೆ ಕೊಲ್ಲಣಿಗೆವರಿದೆಡೆಯಾಡುತಿರಲಿಂತು (ಹಡಕಾ. ೪-೧೧); ಮರಳುಗಳೊಬ್ಬುಳಿಗೊಂಡು ನರ್ತಿಸುತ್ತ ಕೊಡ್ಡಿ ಕೊಲ್ಲಣಿಗೆವರಿದು ಕುಬುಬೂಯೆಂದು ಬೊಬ್ಬಿಡುತಿಹವು (ಅಂಜಜ. ೬-೧೫೩). [ಕೊಲ್ಲಣಿಗೆ + ಪರಿ₁]

**ಕೊಲ್ಲಣಿಸು** (ಕ್ರಿ). ೧. ಎಡೆಯಾಡು; ಸುಳಿದಾಡು; ಸಂಚರಿಸು (?): ಮೋಜಿಯೊಲಿದು ನೋಡಿ ನೃಪಸುತರಿಗೆ ಹುಬ್ಬು ಹಾಱಿಸುವಳು ನಸುನಗುತ ಹಾಡುವುದೊಡನವರೆದೆ ತನ್ನ ತೋಳಿತ್ತಿ ನೀಱಿ ಕೊಲ್ಲಣಿಸುತ್ತುವಳು (ಭರಜ. ೧೨-೮೦); ಬಲ್ಲರ್ ಬರ್ದೆಯರೀಪರಿ . . . ಬಂದಲ್ಲಣಿಗೆಗೊಂಡು ಪೊಣ್ಮುತೆ ಕೊಲ್ಲಣಿಸುವರುಱುದಿ ನುಡಿವರೂಱಿಗವೆಣ್ಣಳ್ (ಚಿಕವಿ. ೪-೩೨). ೨. ಸಂದಣಿಸು; ದಟ್ಟಣೆಗೊಳ್ಳು: ಘಲ್ಲಿಸುವ ಪೂರಜಕೆ ನಿಲ್ಲದೆ ಕೊಲ್ಲಣಿಪ ಮಱಿದುಂದಿಗಳ ರವವೆಲ್ಲೆಡೆಗಳಲಿ (ಉತ್ತರಾ. ೯-೫); ಎಸೆವಾ ಪುಳಿಂದಿಯರ ತನುಕಾಂತಿ ಕೊಲ್ಲಣಿಸಿ (ನಂದಿಮಾ. ೧೩-೨೭). [ಕೊಲ್ಲಣ + -ಇಸು₁]

**ಕೊಲ್ಲಱು** (ನಾ). (?): ಪೊಂಪಱು . . . ಮಲ್ಲಱು, ಕೊಲ್ಲಱು, ಉಂಬಱು (ಶಬ್ದಾನು. ೧೪೦ ವ್ಯಾಖ್ಯಾ). [?]

**ಕೊಲ್ಲಾಟಕ** (ನಾ). ವೇಷಗಾರ (?): ಅಲ್ಲಿಗಲ್ಲಿಗೆ ಬಲ್ಲರ(ರ)ರಿಯರೆಂದು ಕೊಲ್ಲಾಟಕರಂತೆ ಕಥೆ, ಕಾವ್ಯವೆಲ್ಲವ ಹೇಳುವವನಲ್ಲ (ಸರ್ವವ. ೧೨೯-೬೫೩). [?]

**ಕೊಲ್ಲಾಪುರ** (ನಾ). ಒಂದು ಊರಿನ ಹೆಸರು: ಕೊಲ್ಲಾಪುರೇ ಕೋಟಿತೀರ್ಥೇ (ಇಅ. XVI, ೨೪-೬೨; 1009). [?]

**ಕೊಲ್ಲಾಯ್ತ** (ನಾ). ವೇಷಗಾರ; ಆಟಗಾರ (?): ನಚ್ಚಣಿಗರ ಪೊಸ ಪೂವಡಿಗರ ಗರಡಿಗರ ಕೊಲ್ಲಾಯ್ತರ ನುಡಿಗಾಱರ ಮಾಸ್ವಾರರ ಸಂದಣಿ ಸಲೆ ಸೊಗಯಿಸಿತಾಗ (ಜಯುಕಾ. ೧೨-೧೯). [? + -ಆಯ್ತ]

**ಕೊಲ್ಲಾರ**, ಕೊಲಾರಿ, ಕೊಲ್ಲಾರಿ₁, ಕೊಲ್ಲಾರು (ನಾ). ೧. ಸಿಂಗರಿಸಿದ ಕಮಾನು ಬಂಡಿ. ☞ ಪ್ರಯಾಣದಲ್ಲಿ ಸೊಗಸನ್ನುಂಟುಮಾಡುವುದಕ್ಕೆ ಬೇಕಾದ ತಿಂಡಿತೀರ್ಥ ವೊದಲಾದುವುಗಳನ್ನು ತುಂಬಿದ ಎತ್ತಿನಬಂಡಿ: ಕೇರಾಳಾನೆ ಕುದುರೆ ಕೊಟಗೆ ಕೊಲ್ಲಾರ ಕಾರವು ಮೊದಲಾದ ಧಾರುಣಿ ಹೊರಲಱಿಯದ ಸೇನೆ ಪೊಱಮಟ್ಟು (ಶ್ರೀಪಾಲ. ೧೬-೬೭); ಕೊಲ್ಲಾರ ಕೊಟ್ಟಿಗೆ ಬೊಕ್ಕಸ ಭಂಡಾರವೆಲ್ಲವವರಿಗೊಳಗಾಯ್ತು (ಕುರಾಸಾಂ. ೪೧-೬); ದಂಡಿಗೆ ಪಲ್ಲಕ್ಕಿ ಕುದುರೆ ಕೊಲ್ಲಾರದ ಭಂಡಿಗಳೊಲಿದೇಱಿಕೊಂಡು (ಚಂಪ್ರಸಾಂ. ೧೫-೬೩); ಕೊಟ್ಟಿಗೆ ಕೊಲ್ಲಾರ ಕೀಲಾರ ಹೊರೆಯ ತಾಳ್ದೊಟ್ಟಿಗಳ್ವಾಸುಮಂಚಗಳು ಪೆಟ್ಟಿಗೆ ಭಂಡಾರ ಬೊಕ್ಕಸ ಸಾಗಿಬಂದು (ಭರಜ. ೨೩-೪೯). **ಕೊಲಾರಿ**: ೧. ಹೊಲ್ಲಿಯ ಭಂಡಿ ಕೊಲಾರಿ ರಥಂಗಳು ಮೇಲಾನೆ ಕುದುರೆ ವೈಯಾಳಿ (ಅಮುಸಾಂ. ೧-೮೧). **ಕೊಲ್ಲಾರಿ₁**: ೧. ಜೂರಿಸುವ ಮೊಗಸೂಸಿಗೆಯ ಕೊಲ್ಲಾರಿಗಳ ಪರಬಂಡಿಗಳ ಹೊಂದೇರು ಕವಿದುವು (ಕುವ್ಯಾಕ. ೨-೪೪); ಅಂಗನಾನೀಕದಂದಣಂ ಕೊಲ್ಲಾರಿಗಳ ಕೌವ್ವರೆಯೊಳು ನಡೆದರು ಸೊಗಸಿನಿಂ (ಹೇರಮ. ೫-೨೧). ೨. ಬಂಡಿಯ ಬಿದಿರಿನ ಕಮಾನು: ಮೇಲಿನ ಕೊಲ್ಲಾರಿಗೆ ಗೊಂಡೆಗಳನ್ನು ಕಟ್ಟಿ (ಗಂಗಾಸಾ. ೪೯); ಒಂದು ಎತ್ತಿನ ಬಂಡಿ ಕೊಲ್ಲಾರಿ ದಿಗಿಸಿಕೊಂಡು ಗುಡಾರ ಹೊದೆಯಿಸಿಕೊಂಡು ನಿಂತಿತ್ತು (ಭೂವಿಕಾ. ೬೫). **ಕೊಲ್ಲಾರು**: (೧). [? / ತೆಲು. ಕೊಲಾರು, ಕೊಲ್ಲಾರು]

**ಕೊಲ್ಲಾರಬಂಡಿ**, ಕೊಲ್ಲಾರಭಂಡಿ, ಕೊಲ್ಲಾರಿಬಂಡಿ (ನಾ). ಕೊಲ್ಲಾರದ ಬಂಡಿ; ಕಮಾನುಗಾಡಿ: ಕೊಟ್ಟಿಗೆ ಕೊಲ್ಲಾರಬಂಡಿ ಕೀಲಾರವ ನೆಟ್ಟನೆ ನೃಪ ತೆರಳಿಸಿದ (ನಾಗಕು. ೩-೬೦); ಕೊಟ್ಟಿಗೆಯ ಕೊಲ್ಲಾರಬಂಡಿಗಳ ಮೇಲೆ ಸರಕಟ್ಟಣಿಸಿ ನೂಕಿದುದು (ಜೈಮಿಭಾ. ೭-೫). ಝುಗಝುಗಿಸುವ ಕಾಂತಿಯಿಂದ ಸೊಗಯಿಸುವ ಕೊಲ್ಲಾರಬಂಡಿಯ ಲೆಕ್ಕವಬಗೆವನಾರಾ ದಂಡಿನೊಳಗೆ (ಕಂನವಿ.೧೧-೩೩) **ಕೊಲ್ಲಾರಭಂಡಿ**: ಸ್ವಾದು, ಗುಡ, ಶರ್ಕರಾ ಪರಿಪೂರ್ಣವಾಗಿರುವ ಸಾವಿರ ಕೊಲ್ಲಾರಭಂಡಿಗಳನ್ನು ತಂದು (ಕೃವಾಸ. ೧೧೯). **ಕೊಲ್ಲಾರಿಬಂಡಿ**: ಕೊಲ್ಲಾರಿಬಂಡಿಯೊಳ್ ತನ್ನೆಲ್ಲಾ ಪುಸ್ತಕಮನಿಡಿದುತಂದು (ದಿವ್ಯಸೂ. ೧೩-೮); ನಿಬ್ಬಣಕೆ ಹೊರಟಂತೆ ಹಾಡುಗಬ್ಬಗಳ ಕೊಲ್ಲಾರಿಬಂಡಿ (ನೆಲಮು. ೩೩).
[ಕೊಲ್ಲಾರ + ಬಂಡಿ]

**ಕೊಲ್ಲಾರಭಂಡಿ** 'ಕೊಲ್ಲಾರಬಂಡಿ' ನೋ.

**ಕೊಲ್ಲಾರಿ₁** 'ಕೊಲ್ಲಾರ' ನೋ.

**ಕೊಲ್ಲಾರಿ₂** (ನಾ). "ಮುಖಂಡರು, ಹುದ್ದೇದಾರರು, ಪ್ರಮುಖರು" (ಚಿತ್ರಪಾ. ಕೋಶ): ಈ ಮೂರು ಜನ ಅಣ್ಣತಮ್ಮಂದಿರು . . . ತುರು, ಕುರಿ, ಕೊಲ್ಲಾರಿ ಮುಂತಾದ ಕಂಪಳವನ್ನು ತೆರಳಿಸಿಕೊಂಡು ದಕ್ಷಿಣ ದೇಶಕ್ಕೆ ಬಂದರು (ಚಿತ್ರಪಾ. ೪). [?]

೭. (ಆಲಂ) ಬೇಸರದಿಂದ ಗೀಚು : ಇಂದು ಬರೆಯುವುದಕ್ಕೆ ವಿಷಯ ಏನೂ ಇಲ್ಲ. ಬರೆಯದೆ ಇದ್ದರೆ ತಪ್ಪು ಹೊರಬೇಕಾದೀತೆಂದು ಕೊರೆಯುತ್ತಿದ್ದೇನೆ (ಸುವಸಂ. ೧೬). ೮. (ಆಲಂ) ಬೇಸರ ಬರುವಂತೆ ಒಂದೇ ಸಮನೆ ಮಾತನಾಡು : ಶಾಸ್ತ್ರಿಗಳು ಮಂಗಳಗೀತೆಯನ್ನು ಹಾಡುವ ಬದಲು ಅಶುಥ ಮಂತ್ರಗಳನ್ನು ಕೊರೆಯಬೇಕಾಯಿತು (ರೂಢಿ).

[ದೇ. ‖ ತಮಿ. ಕುಱೈ ; ಮಲ. ಕುಱ ; ಕುಇ. ಕ್ರಾಪ]

**ಕೊಱೆ$_2$**, ಕೊಱು (ಕ್ರಿ). ಸುತ್ತು; ತಿರುಗು; ಭ್ರಮಿಸು: "ಕೊಱೆದುದು – ಗರವಟಿಸಿಡುವುದು" (ಶಮುದ. ಷ೦. ೨). **ಕೊಱು** : "ಕೊ[ಪಾಠಾಂ. ಕೊ] ಱು [ಪಾಠಾಂ. ಱೆ]ದುದೆನೆ ಗರವರಿಸಿದರ್ಥಮಕ್ಕು" (ಶಬ್ದಕೃ. ೯೦). [?]

**ಕೊಱೆ$_3$**, ಕೊರೆ$_3$ (ನಾ). ೧. ಕಮ್ಮಿಯಾದುದು; ಕಡಮೆಯಾದುದು. ೨. ಕೊರತೆಯಾದುದು; ನ್ಯೂನತೆ: ಬಂದರೊಳ್ಕೊಱೆಯಿಲ್ಲದ ಹೆಂಗಳಿರ್ದರು ಕಂದರ್ಪನೊಡ್ಡೋಲಗದಿ (ಮೋಹತ. ೫-೪೨). ೩. ಉಳಿದುದು; ಮಿಕ್ಕುದು; ಬಾಕಿ : (ಶಿ). **ಕೊರೆ$_3$**: ೨. ಕೊರೆಗಳಂ ತಿದ್ದಿ (ಸೌಗಂಧಿ. ೧೮೬–೧೧); ಅಳವಿನುಂ ತಿಳಿವಿನುಂ ಕೊರೆಯನಾಂ ನಲ್ಲೆಯಂ ಕಾಣದಳವಳಿದನೆನೆ ಕೇಳ್ವುದೇನಂ (ಸೌನಂದ. ೬–೪೬); ಕೊರೆಯಾವುದಾವೂರ ಸಿರಿಗೆ (ಇಂಚಾಪ. ೭–೨೬).

**ಕೊಱೆ$_4$**, ಕೊರೆ$_4$ (ನಾ). ೧. ಕತ್ತರಿಸುವುದು; ತುಂಡುಮಾಡುವುದು : (ಶಿ). ೨. ತುಂಡು; ಚೂರು: (ಶಿ). **ಕೊರೆ$_4$**: ೨. ಆ ಕೊರೆ ಸಿಗರೇಟನ್ನು ಹುಡುಕಿ ತಂದು (ಅಂಬಿಕೆ. ೮೪); ಬೀಡಿಯ ಕೊರೆಯನ್ನು ನೆಲಕ್ಕೆಸೆದು (ಮಣ್ಣುಹ. ೮೯). ೩. ಭರ್ತಿ ಕಡಮೆಯಾಗಿರುವ ಚೀಲ; ಅರಕಳಿ : ರಾಗಿ ಕೊರೆ (ರೂಢಿ). [< ಕೊಱೆ$_1$]

**ಕೊಱೆ$_5$**, ಕೊರೆ$_5$ (ನಾ). ೧. ಒಂದು ಬಗೆಯ ಧಾನ್ಯ; ಹಾರಕ: "ಕೊಱೆ – ಖಂಡನೇ, ಧಾನ್ಯಭೇದೇ ಚ (ಹಾರಕ)" (ಶಮಧಾ); ಜವೆ ಜೋಳಂ ಕೊಱೆ ಮೊದಲಾದುವರ್ಕೆ (ಲೋಕೋಪ. ೪–೫೬); ಕೊಱೆಯೆಂಬುದುಂಟು ಅಖಿಳ ಧಾನ್ಯಂಗಳ ಒಳಗೆ (ರೇವಣ. ೨೨–೫); ಕೊಱೆಯುಂಟು ಧಾನ್ಯದೊಳ್ (ಸಿದ್ಧೇಷು. ೨–೧೭). **ಕೊರೆ$_5$**: ೨. ಒಂದು ಬಗೆಯ ಔಷಧಿ ಸಸ್ಯ: ಬಿಳಿಹೂಲಿ, ಕೊರೆ, ಸಣ್ಣಹೂಲಿ, ನೆಲಮಾಗಳಿ, ಚೋರ (ವೈಶಿಗಿ. ೩೭–೭೪೬).

**ಕೊಱೆ$_6$** (ನಾ). ತಿರುಗಾಡುವವನು; ಸುತ್ತುವವನು. 'ತಿಱುಕೊಱೆ' ಪರಾ. [< ಕೊಱೆ$_2$]

**ಕೊಱೆ$_7$** 'ಕೂಱೆ' ನೋ.

**ಕೊಱೆಕೂಲಿ** (ನಾ). ಧಾನ್ಯರೂಪದಲ್ಲಿ ಕೊಡುವ ಕೂಲಿ : ಕರೆಯೋ ಒಡ್ಡರೆಱೆಯನಂ ಕೊಱೆಕೂಲಿಗೊಂಡಸೋ ನಾಳೆ ಮಿಕ್ಕುದನಗೆಯ ಬಾರದೇ ಎಂಬನ್ನೆಗಂ (ಸಿದ್ಧರಾ. ೯–೩೯). [ಕೊಱೆ$_5$ + ಕೂಲಿ]

**ಕೊಱೆಕೂಳು** (ನಾ). (ಪಕ್ಷಿಗೆ ಹಾಕುವ) ಕಾಳಿನ ಆಹಾರ; ಎರೆ; ಗ್ರಾಸ: ಬ್ರಹ್ಮಗಿಳಿಗೆ ಪಂಜರವಾದ ವಿಷ್ಣುವಾಗಿಳಿಗೆ ಕೊಱೆಕೂಳಾದ ರುದ್ರನಾಗಿಳಿಗೆ ತಾ ಕೋಳಾದ (ಅವಚಂ. ೫–೧೫); ಕೊಱೆಕೂಳಿನಾಸೆಗೆ ಮಱೆದು ನೀನೊಱಗಲು ಗಱು ಸಹವಾಗಿ ನುಂಗುವುದು ಕಂಡಾ (ಶಿವಗೀ. ೬೬೩). [ಕೊಱೆ$_5$ + ಕೂಳು$_2$ (< ಕೂೞ್$_1$)]

**ಕೊಱೆಗೊಳ್ಳಿ** (ನಾ). ಉರಿದುಳಿದ ಸೌದೆಯ ತುಂಡು; ಕರಿಗೊಳ್ಳಿ : ಕಱೆಗೊರಲನ ಕಣ್ಣ ದಳ್ಳುರಿಯಲಿ ಬೆಂದ ಕೊಱೆಗೊಳ್ಳಿ ನಿನಗೇಕೆ ಪಂತ (ಮೋಹತ. ೧೨–೨). [ಕೊಱೆ$_5$ + ಕೊಳ್ಳಿ$_1$]

**ಕೊಱೆತ**, ಕೊರೆತ (ನಾ). ೧. ಕೊರೆಯುವಿಕೆ; ಕುಯ್ಯುವಿಕೆ : (ಶಿ). **ಕೊರೆತ**: ೧. ಒಳಗಿನ ಕೊರೆತವು ಅತಿ ತೀಕ್ಷ್ಣವಾಗಿದ್ದು (ಮುನಿಮಾ. ೬); ಕೊರುಗುರ್ಗಳ ಕೊರೆತ (ಕಾಲೂರ. ೯೬–೧೯೦). ೨. ಕಂಡರಣೆ; ಕೆತ್ತನೆ: ಸಾಲಾಗಿ ಒಂದೊಂದು ಬಾಗಿಲುಗಳಿರುವಂತೆ ಕಮಾನು ಕೊರೆತಗಳಿಂದ ಒಪ್ಪುತ್ತಿತ್ತದು (ಕಾಬಝೂ. ೭). ೩. (ಆಲಂ) ನೀರಸವಾದ ಹಾಗು ದೀರ್ಘವಾದ ಮಾತಿನಿಂದ ಉಂಟುಮಾಡುವ ಹಿಂಸೆ : ಅವರ ಮಾತಿನ ಕೊರೆತಕ್ಕೆ ಒಮ್ಮೆ ಸಿಕ್ಕಿಕೊಂಡವರು ಇನ್ನೊಮ್ಮೆ ಸಿಗಲು ಅಂಜುತ್ತಾರೆ. (ಒಂಟಿದ. ೬೬); ನಾ ಹೇಳೋದು ಒಣ ವೇದಾಂತವಾದರೆ ಒಣವೇದಾಂತ; ಕೊರೆತ ಆದರೆ ಕೊರೆತ (ಹೊಸಕ್ಷಿ. ೧೦೭).

[ಕೊಱೆ$_1$ + -ತ$_2$]

**ಕೊಱೆದಱು** (ಕ್ರಿ). ಸಣ್ಣಾಗಿ ಕತ್ತರಿಸು; ಚೂರುಚೂರಾಗಿ ಮಾಡು : ತರತರದ ಭುವನದೊಳು ನೆರೆದ ಜೀವರನೆಯ್ದೆ ಕೊಱೆದಱಿದುವುರುಪಿದಾತನ ಪಾತಕಂ ಹರಹರ ವಿರೂಪಾಕ್ಷಚರಣ ಪೂಜನದಿಂದೆ ಹರೆದು ಗಣಪದವೆಂದ (ಸಾನಂಚ. ೩–೭೨). [ಕೊಱೆ$_3$ + ತಱು$_1$]

**ಕೊಱೆಪಲ್** 'ಕೊಱೆವಲ್' ನೋ.

**ಕೊಱೆಮೈನವಿರ್** (ನಾ). ಚುಚ್ಚುವ ಮೈಗೂದಲು; ನಿಗುರಿದ ರೋಮ: ಒಱಗಾಳ್ವೆಱದಲೆ ಕೊಱೆ[ಪಾಠಾಂ. ಮಱೆಯ]ಮೈನವಿರಿಂದ ತುಱುಗಿದ ಮುಸುಮೊಗ ಪಣ್ಣಾ ತೆಱನಱಿಯದ ಕೂಟದೆಮ್ಮವನಿವನಿರೆ ಮಱೆವರೆ ಪಣ್ಣಳಿದಿರೊಳು (ಕುರಾಸಾಂ. ೪೪–೭).

[ಕೊಱೆ$_1$ + ಮೈನವಿರ್ (< ಮೆಯ್ನವಿರ್)]

**ಕೊಱೆಯ** (ನಾ). ಕೊರೆಯಿಸಿಕೊಂಡವನು; ಕೊರತೆಯುಳ್ಳವನು. 'ಮೂಕೊಱೆಯ' ಪರಾ. [ಕೊಱೆ$_1$ + -ಅ$_7$]

**ಕೊಱೆಯಕ್ಕಿ** (ನಾ). ಕೊರಲೆಯ ಅಕ್ಕಿ; ನವಣೆಯ ಅಕ್ಕಿ (?) : ಸಿತ ಸರ್ಷಪದೊಳ್ ಕೊಱೆಯಕ್ಕಿ ದಾರ್ವಿಯುಂ ಬೆರಸು (ಖಮುದ. ೮–೪); ಕಿಱುದೆಂಗಿನ ಬೇರಂ ತಾಂ ಕೊಱೆ[ಪಾಠಾಂ. ಕಱೆ]ಯಕ್ಕಿಯೊಳಾಡಿ ನಳಿಯೊಳಟ್ಟಂಬಲಿಯಂ ಸುಱಿಯೆ ವರುಷಂಬರಂ ಜನಮುಱಿಯಲ್ ವಿಷಮಿಲ್ಲಂ (ಖನುದ. ೧೬–೧೬೨). [ಕೊಱೆ$_5$ + ಅಕ್ಕಿ$_1$]

**ಕೊಱೆವಲ್**, ಕೊಱೆಪಲ್ (ನಾ). ಹರಿತವಾದ ಹಲ್ಲು; ಮೊನೆಯಾದ ಹಲ್ಲು : ಕೊಱೆವಲ್ ಬತ್ತಿದ ಕಾಲ್ ಪಿಂಬಱಿಗೇಸಂ ನೆಕ್ಕಿದವು ಪೊಕ್ಕಿರ್ದ ಬಸಿಱ್ ತೆಱೆದ ಮುಖಕುಹರವರ್ದಿಸೆ ಪಿಱಿತಿನಿಗಳ ಬಳಗವೆಯ್ದೆ ತಂದುದು ಮುನಿಯಂ(ಕಾವ್ಯಾವ. ೪೫೫). **ಕೊಱೆಪಲ್**: ಕೊಱೆಪಲ್ಲ ಕುಳಿರ ಹೇಮಂತನ್ ಪೊಟ್ಟುಬರೆ ಮುಪ್ಪಾಗಿ ಎಳಚಿಗುರ ಚೈತ್ರಂಗೆ ಬಱುವಿಟ್ಟು ಪೋಕುಂ (ಅಕ್ಷತಾ. ೨೭–೨೨). [ಕೊಱೆ$_1$+ ಪಲ್]

**ಕೊಱೆವೋಗು** (ಕ್ರಿ). ತುಂಡಾಗು; ಹೋಳಾಗು : ಶತಖಂಡಮಾಗೆ ನಿಜಶರಹತಿಯಿಂ ಜಾಂಬವ ಶರಂಗಳಂ ಕಡಿದನನಾದ್ಯತನದಱ ಪಿಳ್ಕುಮಲಗುಂ ಕ್ಷಿತಿಯೊಳ್ ಕೊಱೆವೋಗಿ ಕೂಡೆ ಕುಪ್ಪಳಿಸುದಿನಂ (ಮಹಾಸೇ. ೭–೩೮). [ಕೊಱೆ$_1$ + ಪೋಗು$_1$]

**ಕೊಱೆಸು** 'ಕೊಱೆಯಿಸು' ನೋ.

**ಕೊಱೆಯಿಸು**, ಕೊರಿಯಿಸು, ಕೊರೆಯಿಸು, ಕೊರೆಸು, ಕೊಱೆಸು (ಕ್ರಿ). ಕೊರೆಯುವಂತೆ ಮಾಡು; ತುಂಡುಮಾಡು; ಕತ್ತರಿಸು : (ಶಿ). **ಕೊರಿಯಿಸು** : (ಶಿ). **ಕೊರೆಯಿಸು** : (ಶಿ). **ಕೊರೆಸು** : ಆಯೆಮ್ಮ ಕೋಡ ಕೊರೆಸಿರಿ (ಲೋಕಗೀ. ೧೬೭). **ಕೊಱೆಸು** : ಪರಸತಿಯ ಬೇಟದಲಿ ಮಾನವನು ಕೊರಳ ಕೊಱೆಸಿದನೆಮ್ಮ ಗಂಡನ(ಕೌಶಿರಾ. ೩೭–೧೧).

**ಕೊಱೆಯಿಸಿಕೊಳ್, ಕೊಱಸಿಕೊಳ್, ಕೊಱೆಸಿಕೊಳ್** = ಕುಯ್ಯಿಸಿಕೊಳ್ಳು : ತಱಿಸಿಕೊಂಡು ಭಕ್ತರಾದರೆಮ್ಮವರು; ಕೊಱೆಯಿಸಿಕೊಂಡು ಭಕ್ತರಾದರೆಮ್ಮವರು (ಬಸವ. ೨೫೫); ದುರುಳರಾವಣಕೀಚಕಾದಿಗಳಿರದೆ ಪರಸತಿಗಳುಪಿ ಕೊರಳನು ಕೊಱಸಿಕೊಂಡರು (ಅಮೃತ. ೨–೯೩); ಕೊಱೆಸಿಕೊಂಬರು ಕೊರಳನೆಂತಹಱಿಗುಱಿಗಳಕಟಕಟ (ನಿಭಾಗ. ೫–೧೧೨).

[ಕೊಱೆ$_1$ + -ಇಸು$_3$]

**ಕೊಟ್** (ಗು). ಕೊಳೆತು ಅಜಗಿಜಯಾಗಿರುವ; ಅಸಹ್ಯವಾದ; ಕೊಚ್ಚೆಯಾದ. 'ಕೊಟ್ನಿಣ', 'ಕೊಟ್ಬ್ರುದುಳ್' ಪರಾ. [?]

**ಕೊಟಕ**, ಕೊಳಕ (ನಾ). ೧. ಕೊಳೆಯುಳ್ಳವನು, ಹೊಲಸಾದವನು; ಹೇಸಿಗೆಯಾದವನು: ಬೆಳುಕಂ, ತೊಳಕಂ, ಕೊಟಕಂ (ಶಮದ. ೨೫೯ ಪ್ರಯೋ). ೨. ಮಂಡಲದ ಹಾವಿನಲ್ಲಿ ಒಂದು ಜಾತಿ; ಕೊಳಕುಮಂಡಲದ ಹಾವು: ನವಹಯ ಪಿಟ್ಟಂ ಕೊಂಡೊಡನೆ ತೊಟಸಿ ತಿನಲಕಿಮಂಡಿತಮದು ಕೊಟಕನುಗ್ರವಿಷಮಂ ಕಳೆಗುಂ (ಖಮದ ೧೦-೭೩). **ಕೊಳಕ**: ೧. ಅವರು ಸೋಮಾರಿ, ಹೆಡ್ಡ, ಕೊಳಕ, ಕ್ಕಲಿ ಹಾಯುವವರು ಎಂಬುದು ನೋಡಿದ ಕೂಡಲೆ ಗೊತ್ತಾಗುತ್ತಿದ್ದಿತು (ವೃಸರ್ವ. ೨೧); ಆವನು ಕೊಳಕ ಆವನ ಮೇಲಿನ ಗಾಳಿ ಬೀಸಬಾರದೆಂಬ ಭಾವನೆಯೂ ಅನೇಕರಿಗಿದೆ (ಹುಟ್ಟಿಹ. ೧೫೭). [ಕೊಟಕು + -ಅ]

**ಕೊಟಕು**, ಕೊಳಕು (ನಾ). ೧. ಕೊಳೆತುದು; ಹೊಲಸು; ಹೇಸಿಗೆ. 'ಕೊಟಕ' ಪರಾ. **ಕೊಳಕು**: ೧. ಕಳೆದ ಬಟ್ಟೆ ತೊಳೆದಂತೆ ಹರಿದು ಹೋಗುವುದು ಮಲಿನ ಕೊಳಕು (ಅರಳು. ೩೯೧); ಇಂದಿನ ಕಳಸಾಪುರವೆಂದರೆ ಕೊಳಕಿನ ಕೊಂಪೆ (ಕಳಹು. ೧೦೬). (ಗು). ೨. ಕೊಳೆಯಾದ; ಹೊಲಸಾದ: ನೀನು ಹೀಗೆ ಕೊಳಕು ಜನರ ಜೊತೆಯಲ್ಲಿ ಬೆರೆಯುವುದು ನನ್ನ ಮನಸ್ಸಿಗೆ ಏನೂ ಸರಿಬರುವುದಿಲ್ಲ (ಕಮೋಹ. ೩೨). [< ಕೊಟ₁ + -ಕು?]

**ಕೊಟಚೆ**, ಕೊಳಚೆ (ನಾ). = ಕೊಳಕು: ತೃಷಾವಿಷಾದಮಂ ಕೊಟಚೆಯ ನೀರೊಳೀ ಕಳೆವರೆಂದೊಡೆ (ಚಕವ. ೧-೩೭). **ಕೊಳಚೆ**: ಕೊಳಚೆಯ ನೀರಿನಲ್ಲಿ ಗುಂಪನಜಸುವಂ ಮರುಳೆ (ಬಸವ. ೫೩೪); ಹೊಂದೆದ್ದು ರಕುತದ ಸಾಲುಗೊಳಚೆಯ ಕರುಳ ಕುಸುರಿಯ ಬಸಿವ ನೆಣವಸೆಯ (ಕುವ್ಯಾಭೀ. ೧೦-೧೧); ಸ್ವರ್ವದಿಯಂ ಕೊರ್ದಿರ್ಪವಕ ಕೀಲ್ಕೊಳಚೆಯ ಕೊಳೆನೀರ್ಗೊಲ್ವನೇ (ಪಾಪ್ರಾಶ. ೨೯); ಹೊಂಡದ ಕೊಳಚೆಯ ನೀರನು ಕುಡಿದರು ಕಪ್ಪೆಗದೆಷ್ಟು ಕಿಂಕಾರ (ಇಂಚಾಪ. ೨೧೬-೫೦). [< ಕೊಟ₂]

**ಕೊಟಲ್**, ಕೊಳಲ್, ಕೊಳಲು (ನಾ). ಬಿದಿರ ಕೊಳವೆಯಿಂದ ಮಾಡಿದ ಊದುವ ವಾದ್ಯ; ವೇಣು: "ಕೊಟಲ್ - ವೇಣುವಾದ್ಯ. (ಕೊಳಲೆಂಬ ಕ್ರಿಯೆಯೊಳ್ ಕುಳಂ)" (ಶಮದ. ಪರಿ. ೨); ಎಳ್ಳ ಮದ್ದಳೆಯ ಕೊಟಲ ಝುಂಕಾರದ ಪಣಿಗಳ್ ಮುಂದೆ ಬಾಜಿಸುತ್ತುಂ (ವಡ್ಡಾರಾ. ೫೦-೧೨); ದೆಂಟನೂದುವಂಗೆ ಕೊಟಲ್ ದೊರೆಕೊಂಡು ದೆಯಂತೆ (ಧರ್ಮಾಮೃ. ೧೦-೨೫೦); ಮುರಹರನ ಕೊಟಲ ಸನ್ನೆಯ ವರರವಕನುಸರವಿಪೆಂಬಿನಂ (ಜಗವ. ೪-೧೧೫); ಕರಡೆಯು ಮದ್ದಳೆಯ ಕೊಟಲ ಪಳವದ . . . ಕಿನ್ನರದ ಸರಮ ಸರವೂ ಕೊಟಲೊಳ್ (ಸೂಕ್ತಿಸು. ೪-೧೦೪). **ಕೊಳಲ್**: ತ್ರಿಭಂಗಿಯಿಂದಂ ನಿಂದು ಒಪ್ಪುತಿರ್ಪಂದು ಪೊಸ ಕೊಳಲಂ ಕೊಳುತ್ತಂದು . . . ಅಧರದೊಳ್ತಂದಿರಿಸಿ ಕೊಳಲನೊಪ್ಪದಿಂ (ಅನಾರ. ೧೫೧-೧೪). **ಕೊಳಲು**: ಸನೆಯದೂದುವ ಕೊಳಲು ಮೈಯ ತವರದ ಕೊಡಿಗೆ ಎಸೆವುತಿರೆ (ಬಸಕ. ೯-೧೮೨); ಕೊಳಲನೂದುತ್ತಾ ಬಂದ ನಮ್ಮ ಗೋಪಿಯ ಕಂದ ಕೊಳಲನೂದುವುದು ಬಲು ಚೆಂದ (ಪುರಂದ. ೧-೧೩೩-೧); ಕೊಳಲಿಗೆ ಪಶು ಮಿಗ ಘಂಟೆಗೆ ಹಸುಳೆ ಜೋಗುಳಿಗೆ ಸರ್ಪ ಸುನಾಗಸರಕೆ (ಭರಚ. ೧-೮೮); ಕೊಂಬು ಕೊಳಲು ನಾಗಸರ ಭೇರಿ ತಂಬಟೆಯೊಂಬುಳಿ ಬುರುಗು ಡಿಂಡಿಮದ (ಕಂಠವ. ೮-೧೯); ಎಳೆಯ ಮಾವಿನ ಮರಕ ಕೆಳಗೆ ಕೊಳಲನೂದುತ ಗೊಲ್ಲಗೌಡನು (ಗೋಹಾಡು. ೩೧); ಕೊಳಲೂದಿದ ತುಟಿಗಳಲ್ಲಿ ಪಾಂಚಜನ್ಯ ಪುಟಿಯಿತು (ನಲಮು. ೪೦). [ದೇ. ? ತಮಿ. ಮಲ. ತುಳು. ಕುಟಲ್; ತೆಲು. ಕ್ರೋವಿ]

**ಕೊಟವಿ**, ಕೊಳಚೆ, ಕೊಳವಿ, ಕೊಳವೆ, ಕೊಳಾಯಿ, ಕೊಟವೆ (ನಾ). ೧. ಬಿದಿರು ಮೊದಲಾದುವುಗಳ ಪೊಳ್ಳಾದ ಉದ್ದನೆಯ ನಾಳ, —ನಳಿಕೆ "ಧವುನಿಯೆನೆ ಕೊಟವಿ" (ಮಂಗರಾ. ೬೧-೫೦); ಕೊಟವಿ, ಉಟುಗು, ಬೆಟುಗು, ಮೊಟಗು (ಶಬ್ದಾನು. ೧೫೦ ವ್ಯಾಖ್ಯಾ). **ಕೊಳಚೆ**: ೧. ಇದನ್ನು ಮಳದ ಕೊಳಚೆಯಲ್ಲಿ ಇಟ್ಟಿದ್ದಾರೆ (ಚೀನಬಾ. ೧೫). **ಕೊಳವಿ**: ೧. ಇದಾಪಾಸನದ ಕೊಳವಿಯೊ (ಕುವ್ಯಾಆ. ೧೫-೧೭); ಅದ್ದಿ ಧಿಂಕಿಟ್ಟು ಗಗನಕೆದ್ದುದು ಕೊಳವಿಯೊಳೊಗೆ ಬೆಂಕಿ ನಾಲಗೆ ನೀಡುವಂತೆ (ಭರಚ. ೨೪-೩೫); ಕುಂಕಮದ ಕೊಳವಿಗಳಂ ಕರಗಳಿಂ ಪಿಡಿದು (ಸೌಗಂಧಿ. ೧೬೧-೧೫). ೩. ಒಂದು ಅಳತೆಯ ಪ್ರಮಾಣ; ಚಟಾಕು: ದರವು ಮಾತ್ರ ರೂಪಾಯಿಗೆ ಐದು ಕೊಳವಿ (ಚಟಾಕು) (ಪ್ರಸ. ೬). **ಕೊಳವೆ**: ೧. ಬಿದಿರೊಳಗೆ ಬೆಣ್ಣೆ ಹದವ ಬಳಕದಬ ಮೇಲದಂ ಮತ್ತೆ ಮೆಲ್ಲನೆ ತೆಗೆದು ಕೊಳವೆಯುಂಟದಿ ಮಾಡಿ ಅಲ್ಲಿ ಸಕ್ಕರೆಯಿಕ್ಕಿ (ಸೂಪಶಾ. ೧-೩೭); ಕುಂಕುಮ ರಸದುಂಬಿ ಕೈಯಂಡೆಯ ಕೊಳವೆಯ ಚಿಗಿದು (ಮೋಹತ. ೧೪-೩೫). 'ಕೊಳವೆ ಬಾವಿ' ಪರಾ. **ಕೊಳಾಯಿ**: ೩. ನೀರಿನ ನಲ್ಲಿ; ನಳ (ಉಳ): ಸರೋಜ ನೀರಿಗಾಗಿ ಕೊಳಾಯಿ ಬದಿಗೆ ಹೋದ ಸಂಜು ನೋಡಿ (ಪತಿ. ೧೪); ನೀರಿನ ಕೊಳಾಯಿಗಳನ್ನು ಕಟ್ಟಿ ನೀರಿನ ಸೌಕರ್ಯ ಒದಗಿಸಿದ್ದಾರೆ (ದಿಲ್ಲಿಪ. ೧೦೬). **ಕೊಟವೆ**: ೧. (?).

[ದೇ. ? ತಮಿ. ಕುಟ್ಟಿ, ಕುಟಾಯ್; ಮಲ. ಕುಟ; ತುಳು. ಕೊಳವೆ, ಕೊಲವೆ, ಕೊಳಾಯಿ; ತೆಲು. ಕೋಲು, ಕ್ರೋಲು]

**ಕೊಟವಿಮಿಂಟಿ** (ನಾ). ಕೊಳವೆಯ ಮೂಲಕ ಕಲ್ಲು ಹರಳನ್ನು ಹಾರಿಸುವ ಒಂದು ಸಾಧನ: ಮಣಿಗುಬ್ಬಿಯಂ ಕೊಟವಿಮಿಂಟಿಗ ಳಿಂದಿಟ್ಟು ಕೆಡಹಲ್ (ಚಕವಂ. ೪-೨೦). [ಕೊಟವಿ + ಮಿಂಟಿ]

**ಕೊಟವೆ** 'ಕೊಟವಿ' ನೋ.

**ಕೊಟಾಗಾಲ** (ನಾ). ಒಂದು ಊರಿನ ಹೆಸರು: ಬಿಟ್ಟೋಜ ರಾಯುತ್ತ ಕೊಟಾಗಾಲ ಗಂಗಯ (ಎಕ. IV, ಹೆಗ್ಗಡ. ೧೦೪-೧೫; 1037). [?]

**ಕೊಟುಂಗೆಟ್** (ನಾ). ಒಂದು ಬಗೆಯ ತೆರಿಗೆ (?): ಕಾಣಿಕೆಯುಂ ಕೊಟುಂಜಿಗೆಟ್ ಯುಮಂ ಬಿಟ್ಟು ಕೊಟ್ಟು ವಂ (ಸೌಇಎ. ೧೫೩೪, ೩೨೭-೪೯; 1075). [?]

**ಕೊಟುರ್** (ನಾ). ಒಂದು ಊರಿನ ಹೆಸರು: ಜನ್ಮಕ್ಷೇತ್ರಂ ಕೊಟು(ಟೂ)ರ್ ನ್ನಾಡು ಗ್ರಾಮಂ (ಇಅ. XVIII, ೩೩೭-೪; ೫ನೆಯ ಶತ).

[? + ಊರ್]

**ಕೊಟ್₁**, ಕೊಳ್₁ (ಕ್ರಿ). ೧. ಕೆಟ್ಟು ನಾರು; ಹೊಲಸಾಗು; ಕೊಳೆ ಯಾಗು: "ಕೊಟ್ - ಚೀರ್ಣೇ, ಕಾಯಮಲೇ ಚ" (ಶಮಧಾ); ಕೊಟ್ [ಪಾಠಾಂ. ?]ದ ಪುಲ್ಲದರ್ಕಂ ತೊಟ್ಟವಂತನಿತುಮಂ ಕೊಟ್ಟದು (ವಡ್ಡಾರಾ. ೪೬-೧೨); ಎನಿತೊಳವು ಕೊಟ್ಟವ ಪದುಳಗಳನಿತಟ ದುರ್ಗಂಧಮವರ ಮೆಯ್ಯ . . . ನಾತಮುಂ (ಶಾಂತಿಪು. ೭-೧೧೦); ಪಿರಿಯ ಸಿರಿಯಂ ಜನಾಗಡು ಪರಿಣತೆಮುತಿ ಕೊಟ್ [ಪಾಠಾಂ. ಳ್]ದ ಪುಲ್ಲದಕ್ಕಂ ಬಗೆನಂತಿರೆ ಬಗೆದು (ಅಜಿಪು. ೨-೧೧೩); ಎಷ್ಟು ಮುಟ್ಟಿದ ಕುಂಬಳಕಾಯಂತೆ ಒಳಗೊಳಗೆ ಕೊಟ್ಟಿತು (ಧರ್ಮಾಮೃ. ೩-೩೫). **ಕೊಳ್₁**: ೧. ಕೊಳತ ಬೆರಳನು ಧುಕ್ತಲೀಪದೊಳುಳುಹಿದೊಡೆ ಕೆಂಡೀಕೆ ಚಿತ್ರದೊಳಳುಕಮುಸಭೋಗಿಸೆ (ಸಂಧಪ. ೩೩-೨೨); ಒಕ್ಕಲಿಲ್ಲದ ಊರು ಕೊಳೆತು ನಾರುವ ನೀರು (ಕನಕ. ೫೮-೩); ಕುಂಬಳ ಕಾಯಂತೆ ಮನದೊಳು ಕೊಳೆವುತ ಡಂಬಕರೆಂಡರದು ಪ್ರತಿವೆ (ಭರಚ. ೧೭-೧೪); ಹಳಸದು ಕೊಳೆಯದು ಹುಳಿಗಟ್ಟಿಕೊಳ್ಳದು . . . ಅಮಳ ಸುಭಾಷಿತ ರಸವು (ಇಂಚಾಪ. ೨೨೭-೧೦೦).

೨. (ಆಲಂ) ಪ್ರಗತಿಯಿಲ್ಲದೆ ಇದ್ದ ಸ್ಥಾನದಲ್ಲಿಯೇ ಇರು; ಕೊಳೆ ಬೀಳು: ಜನನಾಯಕನಾದ ಮೋಹನನು ಸೆರೆಮನೆಯಲ್ಲಿ ಕೊಳೆಯುತ್ತಿರುವುದನ್ನು ಜನರು ಸಹಿಸುವಂತಿರಲಿಲ್ಲ (ಪಂಜಪಂ. ೨೦೯); ಅಂಥವರು ಅದೇ ತರಗತಿಯಲ್ಲಿ ಕೊಳೆಯುವುದು ಉಚಿತವಲ್ಲ (ಶಿಕ್ಷದ. ೯೮).

[ದೇ. ‖ ತಮಿ. ಕುಟ್ಟ್ಯ; ಮಲ. ಕುಟಿಯು, ಕುಟಿಮ್ಮು; ತುಳು. ಕುರೆ. ಕುಂ; ತೆಲು. ಕ್ರುಳ್ಳು]

**ಕೊಟ್ಟ್$_{2}$, ಕೊಳ್$_{2}$** (ನಾ). ೧. ಕೊಳೆತುದು; ಹೊಲಸು: "ಕೊಟ್ = ಜೀರ್ಣೇ, ಕಾಯುಮಲೇ ಚ" (ಶಮುಧಾ); ಕೊಟ್ಟಿಯುಂ ಬಿಣ್ಪುಂ ಲೋಳೆಯುಮಳವಲ್ಲದ ವಜ್ರಲೇಪದಂತಿರೆ (ಧರ್ಮಾಮೃ. ೪-೧೬೬); ತನುಸೌಖ್ಯಮಕ್ಕುಮಕ್ಕುಮೆಂದೆನಿತೆನಿತಂ ತೊಳೆದೊಡಮದಕ್ಕೆ ಕೊಟ್ ಸಹಜಂ (ಸಮುಪ. ೬-೩೦); ತೊಡಲ ಕೊಟ್ಟಿಯುಂ ಪುಟುಗಳುಂ ಸುರಿಯೆ (ಜೀವಸಂ. ೪೩-೧೧). (ಗು). ೨. ಕೀಳಾದ; ಅಧಮವಾದ. 'ಕೊಟ್ಟಿಗಬ್ಬ', 'ಕೊಟ್ಟಿದೆಯ್ವ' ಪರಾ. **ಕೊಳ್$_{2}$**: ೧. ಬಿಲದಿ ಮುಳುಗಲು ಕೊಳೆಯ ಕಾಯದ ಮಲವು ಪೋಗುವುದಾಗಲೇ (ಗಗಪಾ. ೯-೪೫). ೩. ಕೆಸರು; ರಾಡಿ; ಕೊಚ್ಚೆ: ಅತಿವೃಷ್ಟಿಯಾಗೆ ಕೆಯ್ಗಳು ನೆರೆಯ ಪಾಲೊ ಅಥವಾ ಕೊಳೆಯ ಪಾಲೊ ತಾನಾಗುವುದು ನಿಶ್ಚಯಂ (ಹಪ್ಪರ. ೨೪-೧೦); ಎಮ್ಮೆ ಕೋಣಗಳಾಟ ಕೊಳೆಯಲ್ಲಿ ಕುಂಟೆಯೊಳ್ (ಕಾಲೂರ. ೧೨೧-೨೫೩).

ಕೊಳೆಹಾಕು = ಪ್ರಗತಿಯಿಲ್ಲದೆ ಇದ್ದಲ್ಲಿಯೇ ಇರಿಸು: ಅವನನ್ನು ಅದೇ ಕೆಲಸದಲ್ಲಿ ಕೊಳೆಹಾಕಿದ್ದಾರೆ (ರೂಢಿ). [< ಕೊಟ್$_{1}$]

**ಕೊಟ್ಟಿಗಂಪು** (ನಾ). ಕೊಳೆತದ ನಾತ; ಹೊಲಸು ವಾಸನೆ; ದುರ್ಗಂಧ: ಕೊಟ್ಟಿತೊಸರುತಿರ್ದಾ ಮೆಯ್ಯನ್ ಎಲ್ಲ ಬತ್ತಲೆಗೆಯ್ದು, ನಮುಗದಱ ಕೊಟ್ಟಿಗಂಪು ಬಡಿವುದನ್ ತಪ್ಪಿಸಿಕೊಳಲ್ . . . ಮೇಡ ಕೋಡಿನ ಮೇಲೆ ಕುಳ್ಳಿರ್ದರ್ಪರ್ (ಅಂತಿಗೊ. ೧೯-೩೯೮). [ಕೊಟ್$_{2}$ + ಕಂಪು]

**ಕೊಟ್ಟಿಗಣ್, ಕೊಳೆಗಣ್ಣು** (ನಾ). ಕೊಳೆ ತುಂಬಿದ ಕಣ್ಣು; ಹೊಲಸು ಕಣ್ಣು: ಕೊಟ್ಟಿಗಣ್ಣುಂ ದಿಟ್ಟಬಾಯುಂ ಕೂಡಿದವುರ್ಬುಗಂ (ಧರ್ಮಾಮೃ. ೬-೨೨೫). **ಕೊಳೆಗಣ್ಣು**: ನೀರುಗಣ್ಣು, ಜಾರುಗಣ್ಣು, ಕೊಳೆಗಣ್ಣು, ಹುಳುಗಣ್ಣು (ಕುಕಸ. ೩೨೮). [ಕೊಟ್$_{2}$ + ಕಣ್]

**ಕೊಟ್ಟಿಗಬ್ಬ** (ನಾ). ಕೀಳು ತರಗತಿಯ ಕಬ್ಬ; ದೋಷಯುಕ್ತವಾದ ಕಾವ್ಯ: ನಿರರ್ಥಮಪ್ಪ ಕೊಟ್ಟಿಗಬ್ಬಮನುಬ್ಬರಮಾಱ್ಪ ಗರ್ವದಿಂದೆಸೆವನನಿಕ್ಕು ಕಿಚ್ಚಿನೊಳಗಿಕ್ಕಿದೊಡಾಗರೆ ಮತ್ತೆ ಕಬ್ಬಿಗರ್ (ಸೂಕ್ತಿಸು. ೧-೬೪). [ಕೊಟ್$_{2}$ + ಕಬ್ಬ$_{1}$]

**ಕೊಟ್ಟಿಗಬ್ಬಿಗ** (ನಾ). ಕೀಳು ಕಾವ್ಯಗಳನ್ನು ರಚಿಸುವವನು; ಕೆಟ್ಟಕವಿ: ಮಹಾಕವೀಂದ್ರ ಮಾಧವನೆಣೆಯಪ್ಪೆನೆಂಬ ಕೊಟ್ಟಿಗಬ್ಬಿಗನಿನ್ನಯ ಗರ್ವಮೆಂತುಟೋ (ಧರ್ಮನಾ. ೧-೬೬). [ಕೊಟ್ಟಿಗಬ್ಬ + -ಇಗ]

**ಕೊಟ್ಟಿಗೊಳ್** (ಕ್ರಿ). ಕೊಳೆಯಾಗು; ಮಾಸು; ಹೊಲಸಾಗು: ಕುಸುಮಘಟಾನ್ವಿತ ಕೊಟ್ಟಿಗೊಂಡ ಸೀರೆಯಂ ಪೊದೆದು ವಸ್ತ್ರಮಂ ಧನಮುನಪೇಕ್ಷಿಸಿ ಗುರುಕುಲಕ್ಕೆ . . . ಪೋಪಳ್ (ಜಾತಕ. ೧೯-೧೬). [ಕೊಟ್$_{2}$ + ಕೊಳ್$_{1}$]

**ಕೊಟ್ಟಿದುಪ್ಪ** (ನಾ). ಕೆಟ್ಟತುಪ್ಪ; ಹೊಲಸು ನಾರುವ ತುಪ್ಪ: ಕುದಿಸಿ ಕೊಟ್ಟಿದುಪ್ಪಮಂ ಕುದಿದ ದುಗ್ಧದೊಳ್ ಬೆಣ್ಣೆಗೊಂಡು ಕಾಸಿದೊಡಂ ಮೇಣ್ ಸದಗುಪ್ಪೆ ಬೆರೆದದಂ ಕಾಸಿದೊಡಂ ಕಸ್ತುರಿಯ ಗಂಧಮಂ ಗೆಲಲಕ್ಕುಂ (ಲೋಕೋಪ. ೮-೪೦). [ಕೊಟ್$_{2}$ + ತುಪ್ಪ]

**ಕೊಟ್ಟಿದೆಯ್ವ** (ನಾ). ಕೀಳಾದ ದೈವ; ಹೀನದೇವತೆ: ಮಾಂಗೆ ಮುಸಱಿಗೆಯನಿಪ್ಪ ಕೊಟ್ಟಿದೆಯ್ವಂಗಳ್ (ಸಮುಪ. ೯-೧೨೬). [ಕೊಟ್$_{2}$ + ದೆಯ್ವ]

**ಕೊಟ್ಟಿನಾಱು, ಕೊಳೆನಾಱು** (ಕ್ರಿ). ಕೊಳೆತು ಕೆಟ್ಟ ವಾಸನೆ ಬರು; ಗಬ್ಬುನಾರು: ಅಗುರ್ವಿನ ಕೊಟ್ಟಿನಾರ್ಪ ಕೋಟ್ಯಸಬಿ ಬಾವಿಯೊಳ್ (ಆದಿಪು. ೨-೪೩); ಜಲಧಿಯೊಳು ಕಪ್ಪೆ ಸತ್ತೊಡೆ ಜಲಧಿಯ ನೀರೆಲ್ಲಮಟ್ಟ ಕೊಟ್ಟಿನಾರ್ಪುದೆ (ಧರ್ಮಾಮೃ. ೫-೨೪೦); ಇಂದಿನಿರುಳೊಳ್ ಮೂವರ್ಮಂತ್ರಿಗಳ್ ತನ್ನಂ ಕೊಟ್ಟಿನಾಱುವ ಕೆಸಱುಳ್ಳ ಬಾವಿಯೊಳ್ ಮುಳುಗಿಸಿ (ಪೂರ್ವಪು. ೧೮); ಕಟ್ಟಿದ ಪಲ್ಗಳಟ್ಟಡೆಯ ಕೀಟಗಳಿಂ ಕೊಟ್ಟಿನಾರ್ವ ಬಾಯ್ (ಸೂಕ್ತಿಸು. ೮-೩೮೪). **ಕೊಳೆನಾಱು**: ಪುಳಿತುದು . . . ಪಲವು ದಿವಸಮಿರ್ದುದು ಕೊಳೆನಾರ್ವುದು ರುಚಿಯಲ್ಲದ ಪಿಂಡಂ ಕುದಿರೆಗೆ ತಾಂ ಪೊಲ್ಲದೆನಿಪ ಕವಳಮನಿಕ್ಕಂ (ಅಶ್ವಶಾ. ೬-೮೧). [ಕೊಟ್$_{2}$ + ನಾಱು$_{1}$]

**ಕೊಟ್ಟಿನೀರ್, ಕೊಳೆನೀರ್** (ನಾ). ಕೊಳೆತ ನೀರು; ಮಲೆತ ನೀರು; ಹೊಲಸಾದ ನೀರು: ಹೊಲೆಯಂ ಮೊದಲಾಗಿ . . . ಕುಡಿಯಂ ಕುಲಹೀನನಾಗಿಯುಂ ಕೊಗಲ ಕೊಟ್ಟಿನೀರನೆಂದೊಡಕ್ಕುಮ ಕುಡಿಯಲ್ (ಸಮುಪ. ೬-೧೯). **ಕೊಳೆನೀರ್**: ಸ್ವರ್ಣದಿಯಂ ಪೊರ್ದಿರ್ಪವಂ ಕಿಳ್ಗೊಳಚೆಯ ಕೊಳೆನೀರ್ಗೊರ್ಲ್ವನೇ (ಪಾಪ್ರಾಕ. ೨೯). [ಕೊಟ್$_{2}$ + ನೀರ್$_{1}$]

**ಕೊಟ್ಟಿನೆತ್ತರ್** (ನಾ). ಹೊಲಸಾದ ನೆತ್ತರು; ಕೆಟ್ಟ ರಕ್ತ: ಹಡಿಕೆಯ ತಾಣಮೆಯ್ದೆ ಕೊಟ್ಟಿನೆತ್ತರ ಕೀವಿನ ಭಾಜನಂ (ಬಾಧಪು. ೫-೩೦). [ಕೊಟ್$_{2}$ + ನೆತ್ತರ್]

**ಕೊಟ್ಟಿಯಮ್ಮ** (ನಾ). ಒಬ್ಬಾತನ ಹೆಸರು: ಕೊಟ್ಟಿಯಮ್ಮನ ಅಳಿಯಂ ಚಪ್ಪಯ್ಯನ ಮಗಂ ಪುನ್ನಿ ಗೋಸಾಸಿ ಕೆಱೆಯಮ್ಮಾಡಿಸಿ (ಎಕ. VIII, ಸೊರಬ. ೧೦೦-೬; 986 ?). [ಕೊಟ್ ? + ಅಮ್ಮ$_{1}$]

**ಕೊಟ್ಟಿವಾವು** (ನಾ). ಕೊಳಕುಮಂಡಲದ ಹಾವು: ವಸು ಜ್ವ(ಜ)ರದು(ಗ)ಸಿದೊಡೆ ಹೊಲೆಯರ ಮಸಣದ ಬೂದಿಯನೆ ಪೊಸುಗಲ್ಲದೊಡು ದ್ಧೂಳಿಸು ತಡೆಯದೆ ಕೊಟ್ಟಿವಾವಿನ ಭಸಿತಮನನಿತಱೊಳೆ ತಜ್ಜ್ವರಂ ಪ್ರಶಮಿಸುಗುಂ (ಲೋಕೋಪ. ೯-೨೦೬); ಜಳಮತಿಗೆ ಧರ್ಮಮಂ ನಿರ್ಮ್ಮಳಮಪ್ಪಂತಾಗಿ ತಿಳಿಪುತಿರ್ದೊಡಮೆಂತುಂ ತಿಳಿಯದನಂ ಹುಟಿ ತಿಳಿಗುಮೆ ಕೊಟ್ಟಿವಾವಿಂಗೆನಿತನೋದೆಯುಂ ಗಾರುಡಮಂ (ಸಮುಪ. ೧೩-೬೩); ಕೊಟ್ಟಿವಾವು ಗಾರುಡಮಂ ಕೇಳದಂತೆ ಕೇಳದಿರೆ ಬೇಸತ್ತು (ಧರ್ಮಾಮೃ. ೨-೧೦೨); ಮತ್ತಮಲ್ಲಿ ಕೊಟ್ಟಿವಾವಾಗಿ ಪುಟ್ಟಿದೊಡೆ (ಬಂಹರಿ. ೧೩-೩೩ ವ); ಕೊಟ್ಟಿವಾವಿನ ಕೂರ್ಯನ ವಿಷವಂಟಿಗುಂ ಗೋರಟಿಯ ಮೂಲಮಂ ಪೊಸಲೊಡಂ (ಖವುದ. ೧೦-೬೮). [ಕೊಟ್$_{2}$ + ಪಾವು$_{1}$]

**ಕೊಟ್ಟಿಸಕ್ಕದ** (ನಾ). ಬಹಳ ಹಳೆಯ ಸಂಸ್ಕೃತ; ಪ್ರಚಲಿತವಲ್ಲದ ಸಂಸ್ಕೃತ: ಪಟಿಗನ್ನಡಂ ಪುದುಂಗೊಳೆ ಕೊಟ್ಟಿಸಕ್ಕದಮಂ ತಗುಳ್ದಿಡಾಪ್ ಕಿಡೆ ಮುತ್ತಂ ಮೆಟಸಂ ಕೋದಂತಿರೆ ಪೇಟ್ವ್ಯಟಿಗವಿಗಳ ಕವಿತೆ ಬುಧರನೆರ್ದೆ ಗೊಳಿಸುಗುಮೇ (ಕಾವ್ಯಾವ. ೫೫). [ಕೊಟ್$_{2}$ + ಸಕ್ಕದ]

**ಕೊಟ್ಟಿಸುಸಿಲ್** (ನಾ). ಕೆಟ್ಟ ಸುರತ; ಹೀನವಾದ ರತಿ: ನೀಚ ಶಬರ ಚೇಟೀಚೇಟ ಪರಮ ದರಿದ್ರಾದಿಗಳ್ ನೆಗಟ್ದ ಕೊಟ್ಟಿಸುಸಿಲೆಲ್ಲಂ ರಸಾಭಾಸಂಗಳೆಂದಱಿವುದು (ರಸರ. ೪-೨೫೯ ವ). [ಕೊಟ್$_{2}$ + ಸುಸಿಲ್]

**ಕೊಟ್ಗ್ಸಱ್$_{1}$** 'ಕೋಟ್ಗ್ಸಱ್$_{1}$' ನೋ.

**ಕೊಟ್ಗ್ಸಱ್$_{2}$**, ಕೊಗ್ಗೆಸರು, ಕೊಗ್ಗೆಸಱ್, ಕೊಗ್ಗೆಸಱು, ಕೊಳ್ಗೆಸಱ್, ಕೋಳ್ಕೆಸಱ್, ಕೋಳ್ಗೆಸಱ್, ಕೋಟ್ಕೆಸಱ್$_{2}$, ಕೋಟ್ಗೆಸಱ್$_{2}$ (ನಾ). ಮಂದವಾದ ಕೆಸರು; ಅಜಗಿಜಿಯಾದ ಕೆಸರು, ಬಗ್ಗಡ: ಅಮರ್ದಿನ ಕೊಟ್ಗ್ಸಜಾಜ್ ಸರೋವರಂ (ಉದ್ಭ. ೯-೮೪).

**ಕೊಗ್ಗೆಸರು :** ಹುಬ್ಬುಗಳು ಗಂಟಿಕ್ಕಿ ಹೊಯ್ದಾಡಿದರು ಸಮರದ ಲೀವೃದ್ಧಿ ಕೊಗ್ಗೆಸರಾಗಿ ರುಧಿರದ ಹಬ್ಬವಾಗಲು (ಮೂಲರಾ. ೬-೪೯) ; ಸಾರ ಪರಿಮಳವಿರಲ್ಕೊಗ್ಗೆಸರ ಮೈಗೆ ಲೇಪಿಸಿ ಕೊಂಬ (ಪತಿಲ. ೧೬-೨೬). **ಕೊಗ್ಗೆಸಱ್ :** ಪೌರುಷದೇವನ ಲಲನೆಯ ಪಾಪದ ಕೊಗ್ಗೆಸಱೊಳ್ [ಪಾಠಾಂ. ಕಗ್ಗೆಸರೊಳ್] ಪಂಕಜದಂತಿರೆ ಪುಟ್ಟಿದಳೊಲವಿಂ (ಆದರ. ೧೪೭-೧). **ಕೊಗ್ಗೆಸಱು :** ನಡೆವುತ್ತ ಕೊಗ್ಗೆಸಱಲ್ಲಿ ಕಾಲ್ಗಳು ಜಾಱಿ ನಡನಡುಗಿ (ಬಸಪು. ೧೦-೬) ; ಕೊಗ್ಗೆಸಱು ಕಡಿಖಂಡ ಮಾಂಸದ ನೆಗ್ಗಿದೆಲುಗಳ ಶಸ್ತ್ರನಿಕರ (ಪಿಭಾಗ. ೧೦-೫೬-೨೪). **ಕೊಳ್ಗೆಸಱ್:** ಬಂಡೆಂಬ ಕೊಳ್ಗೆಸಱೊಳಗೆ ಸಿಲ್ಕಿ ಜಿನುಗುವ ಮಱಿಗೆ ಸೌರಭ್ಯರಸದ ಕುಟುಕಿತ್ತು ಬಾಣಂತಿ ದುಂಬಿ ಮೆಱೆದವು (ಹಡಕಾ. ೩-೪೧) ; ಸಂಸಾರವೆಂದೆಂಬ ಕೊಳ್ಗೆಸಱ ತೊಳೆದವರು (ಸಿದ್ಧೇಪು. ೨೨-೧೦). **ಕೋೞ್ಕೆಸಱ್ :** ಕೋೞ್ಕೆಸರ್ಮೊಗೆದುವಂ ಪಾಲ್ಗಡಲೆಂದು ಕಂಡರಕಟ (ರಕ್ಷಾಪ. ೬೯). **ಕೋೞ್ಗೆಸಱ್ :** ಮಿದುಳ ಕೋೞ್ಗೆಸಱ ಹೊನಲಿಡುವ ರಕುತದ (ಹಡಕಾ. ೧೨-೩೪); ಪಟ್ಟದಾನೆಗಳು ಕಣ್ಗೆಸೆದುವು ಮದದಿಂದ ಪುಟ್ಟಸುತಲ್ಲಿ ಕೋೞ್ಗೆಸಱ(ಕುರಾಸಾಂ. ೪-೭೧); ಜೊಂಡೇಳ್ದ ಕಾಳ್ಮಿದುಳ ಕೋೞ್ಗೆಸಱಿಂದ (ರಾಜಶೇ. ೫-೧೨೦ ವ). **ಕೋಟ್ಕೆಸಱ್₂ :** ಅಗುರ್ವಿನ ಕೊಟ್ನಾರ್ಪ ಕೋಟ್ಕೆಸಱ ದಾವಿಯೊಳರ್ದೆ (ಆದಿಪು. ೨-೪೩); ಮಿದುಳ ಕೋಟ್ಕೆಸರೊಳ್ ಪೊಕ್ಕು ಪೊಕ್ಕು (ಗದಾಯು. ೬-೨೮ ವ). **ಕೋಟ್ಗೆಸಱ್₂ :** ಕುಳಿರ್ವಿಂದುವೆಂಬ ತಿಳಿಗೊಳದೊಳಗೊಯ್ಯನೆ ಚಂದ್ರಿಕಾಂಬುವಂ ಕುಡಿಯಲ್ಕೆಂದೊಳವೊಕ್ಕ ಮರ್ದಿನ ಕೋಟ್ಗೆಸಱೊಳಟ್ಟುದೆನಿಸಿತ್ತು ನಿಭೃತ ಚರಣಂ ಹರಿಣಂ (ಕಾದಂಪೂ. ೨೮೬). [ಕೊಟ್ + ಕೆಸಱ್]

**ಕೊಟ್ಟ್ರಲಿ** 'ಕೊತ್ತ್ರಟು' ನೋ.

**ಕೊಟ್ಟ್ರಲಿಪಳ್ಳಿ** (ನಾ). ಒಂದು ಹಳ್ಳಿಯ ಹೆಸರು : ಅಸ್ತಿ ಬಸ್ದು ಕೊಟ್ಟ್ರಲಿ ಪಳ್ಳಿದ ಅಲ ಕಿಱುಕೆಯ ಕರ್ಗಲ್ಲ ಒಳ್ಪಿಯೆ (ಮೈಆರಿ. ೧೯೧೯, ೧೦-೭; 900). [ಕೊಟ್ಟ್ರಲಿ? + ಪಳ್ಳಿ]

**ಕೊಟ್ಟ್ರಬು** 'ಕೊತ್ತ್ರಬು' ನೋ.

**ಕೊಟ್ಟೂತ್ರಬ** (ನಾ). ಒಬ್ಬಾತನ ಹೆಸರು : ಕೊಟ್ಟೂತ್ರ[ಬ]ನ ಪೊಲ[ಮನ] ಕಾದುವಮನ್ನು ಸಂಚ್ಛೇದಿಸಿ ನಡವಾಗಳ್ದ ಬಟ್ಟಗೆಱನೆಱಮ್ಮ ಕಲಿಗಳ್ಳ ನೆಂಜೋ (ಸೌಇಇ. XI-i, ೨೧-೬ ; 893). [?]

**ಕೊಟ್ನೆಣ** (ನಾ). ಅಜಿಗಿಜಿಯಾದ ಕೊಬ್ಬು, —ನೆಣ : ಬಿಸಿಲ ಬೆಕ್ಕೆಯಂತೆ ಕರಗಿ ಕಱಂಪು ನಾಱುವ ಕೊಟ್ನೆಣನುಮಗುರ್ವಂ ಪಡೆಯ (ಶಾಂತಿಪು. ೭-೯೫ ವ). [ಕೊಟ್ + ನೆಣ]

**ಕೊಟ್ಪುಯ್ಯಲ್** (ನಾ). ತುರುಗಾಳಗ (?) : ದೋರಪ್ಪೆಯ ಮಗಂ ಮಲ್ಲುಗಂ ಕೊಟ್ಪುಯ್ಯಲ್ಪರಿದು ತುಱುವುಂ ಕೆಱೆಯುಮನಿಕ್ಕಿಸಿ ಕಾದಿ ಸತ್ತಂ (ಎಕ. XII, ತಿಪಟೂ. ೫೫-೨; 889). [< ಕೋೞ್ + ಪುಯ್ಯಲ್]

**ಕೊಟ್ಪೋಕ** (ನಾ). ಒಂದು ವಂಶದ ಹೆಸರು (?) : ಕೊಟ್ಪೋಕರ ಗ[ಂ]×ಯ್ಯನ [illegible]ಖಿತಂ (ಸೌಇಇ. XI-i, ೨೪-೧೮ ; 897). [?]

**ಕೊಟ್ಮಿದುಳ್**, ಕೊಳ್ಮಿದುಳ್, ಕೊಳ್ಮಿದುಳು, ಕೋಟ್ಮಿದುಳ್ (ನಾ). ಅಜಿಗಿಜಿಯಾದ ಮಿದುಳು ; ಜಜ್ಜಿದ ಮಿದುಳು : ಕೋಡ ಕೊಱೊಳಲ್ಲುಗುತಿರೆ ಕೊ[ಪಾಠಾಂ. ಕೋ]ಟ್ಮಿದುಳ್ಪರಸಿ ಮಸ್ತಕ ಪಿಂಡದ ಮೌಕ್ತಿಕೋತ್ಕರಂ (ಪಂರಾಮಾ. ೧೩-೪೪); ನೆತ್ತಿಯಿಂ ಕೊಟ್ಮಿದುಳ್ ಸಿಡಿಸೆ (ಜಗಪಿ. ೯-೮೩). **ಕೊಳ್ಮಿದುಳ್ :** ವೈರಿಮನ್ನೆಯರ ಕೊಳ್ಮಿದುಳಿಂ ಪೊಸಗಣ್ಣದಿಕ್ಕೆಯುಂ (ಎಕ. VIII, ಸೊರಬ. ೧೩೮-೩೯ ; ಸು. 1145). **ಕೊಳ್ಮಿದುಳು:** ಪೊಱಪೊಣ್ಮುವ ಕೊಳ್ಮಿದುಳು ಪೂದಳ್ದಾಸುರ[illegible]ಗೆ (ಎಕ. VIII, ಸಾಗರ. ೧೫-೪೭ ; 1218). **ಕೋಟ್ಮಿದುಳ್ :** ಕೋಟ್ಮಿದುಳುಂ ಬರ್ಚೆಯ ಕೊಳೆಯುಂ ಸೂಸಿದುವು (ಪಂರಾಮಾ. ೧೧-೨೦); ಪೆಣದ ದೆಣಂದೆ ಕೋಟ್ಮಿದುಳ ಕೋಟ್ಕೆಸಱಿಲ್ಪಿನ ಪರ್ವತಂ (ಜಗಪಿ. ೭-೪೪); ಮುಕ್ತುಗಳ್ಪೆರಸು ಸೂಸುವ ಕೋಟ್ಮಿದುಳಿಂ ದಿಶಾಮುಖಂ ಶಿಱಿಪೆಡೆದಿರ್ದ ಕೆಯ್ಗಡಿಯ ಸಂದಣಿಯಿಂ (ವರ್ಧಪು. ೭-೪೮); ಮಿಮಿಮಿಮಿಸುತಿರ್ಪ ಕೋಟ್ಮಿದುಳಿಂ (ಶೃಂಗಾರ. ೧-೮೯). [ಕೊಟ್ + ಮಿದುಳ್]

# ಕೋ

**ಕೋ₁** (ಕ್ರಿ). ೧. ಮಣಿ ಮೊದಲಾದುವುಗಳನ್ನು ನೂಲಿನಿಂದ ಏರಿಸು ; ಪೋಣಿಸು : "ಕೋ - ಸೂತ್ರಪ್ರವೇಶೇ (ಪೋಣಿಸು)" (ಶಮಧಾ) ; ಇಂದ್ರನೀಲಮಂ ಮುತ್ತುಮನೋಳಿಯೋಳಿಯೊಳ್ ಕೋದೆಬಲಿಕ್ಕಿದ ಮಾಲೆಯಂತೆವೋಲ್ (ಪಂಪಭಾ. ೧೧-೮೧); ಒಪ್ಪಮಂ ತಾಳ್ದಿದ ಮಕರಪತಾಕಾಳಿಯುಂ ಕೋದು ದೇವಾಯತನಂಗಳ್ . . . ರಂಜಿಸುತ್ತಿರ್ಪುವೆತ್ತಂ (ಕಾದಂಪೂ. ೨೯೬) ; ಮಾಲೆಗೋದವೋಲ್ ಸೊಗಯಿಪ ಪಂಚರತ್ನಘಟಮಾಲೆ ಪಳಂಚಲೆದತ್ತು (ಮಲ್ಲಿಪು. ೧೨-೧೩೯); ಮುತ್ತಂ ಮೆಱಸಂ ಕೋದಂತಿರೆ (ಕಾವ್ಯಾವ. ೫೫) ; ರುದ್ರಾಕ್ಷಿಗಳ ಕೋವ ವಿಮಲ ಶಿವಲಿಂಗಕ್ಕೆ ರುದ್ರಾಭಿಷೇಕಮಂ ಮಾಳ್ಪ (ಚಬಸ. ೩೪-೨೫). ೨. ಸಿಕ್ಕಿಸು ; ಸೇರಿಸು : ರಥದ ಕೀಲ್ ಮುಱಿದಾಗಳೆ ಕೈಯನಲ್ಲಿ ಕೋದೆಸಗುವ ಸೂತರ್ (ಪಂಪಭಾ. ೧೧-೬೫) ; ಕೊಲಕೊಲ್ಲದಂಗಪತಿ ದಿಲ್ಲೊಳೆ ಕೋದೆಳೆವಲ್ಲಿ ಗಂಡನಾಗನೆ (ಗದಾಯು. ೩-೨೭) ; ಪೊಸಪೊದೆ ಪೆಗಲೊಳ್ ಕೋದ ಕೋಬು ಬದಿಕೋಲ್ . . . ದೇಸಿಯನೊದವಿಸಿ ನಡೆದತ್ತು ದೇಂಟಿಗಾಱರ ತಂಡಂ (ಸೂಕ್ತಿಸು. ೩-೧೦೨) ; ವಿವಿಧ ವಾದಕರೊಳಗದೊರ್ವನ ಹೆಗಲ ಹಱಿವೊಂದ ತವಕಿಸದೆ ತೆಗೆಕೊಂಡು ತನ್ನೊಳ್ಪುವ ಹೆಗಲಿನೊಳು ಕೋದು (ಸಾಳ್ವಭಾ. ೮-೫೫); ಬಳಿಕ ಬೆನ್ನನು ಕೋದು, ಕೈಕಾಲ್ಗಳನು ತೀಱಿಸಿ, ಹೊಳೆದಳು ಮಳೆಯ ಬಿಲ್ಲಿನ ಹಾಗೆ (ಕವಿಪು. ೩೮-೧೩). ೩. ಚುಚ್ಚು ; ತಿವಿ ; ನಾಟಿಸು : ಅಡೆಯಂ ಕೋದ [ಪಾಠಾಂ. ಕೋ]ತ್ತುತುಂ ಮೂರ್ದನಿಗೆ ಮುಸಗುತುಂ (ಲೀಲಾವ. ೫-೧೦೨) ; ತನ್ನೊಂದು ಕಾಯ್ಪಿಂದರಿಯಂ ಕೋದೆತ್ತಿ ಕೋಡೊಳ್ ತಳರ್ದುರ್ (ಸೂಕ್ತಿಸು. ೩-೩೫) ; ಹೊಳೆಹೊಳೆವ ಕೂರಂಬಿನಲಿ ಕೋದನು ಗಜ ಮಸ್ತಕವ (ಕುವ್ಯಾದ್ರೋ. ೩-೭೪). ೪. ಕಟ್ಟು ; ಬಂಧಿಸು : ಪರಿಗ ಬಂತಿಯುಂ ಕಾಲಿಂ ಕೋವರು ಮಣಲಂ ಸರವಿ ಪೊಸೆವರು (ಸೌಇಇ. IX-i, ೨೮೬-೧೮ ; 1190) ; ಉನ್ನತದ ಪಾಶದಿಂದಂತಕಂ ಕೋದೆಳೆಯೆ(ಚಬಸ. ೫೧-೧೯). ೫. ಸಿಕ್ಕು ; ವಶವಾಗು : ತಳಾಱರ ಕೋಟೆ ಬಂದಿಯಲ್ಲಿ ಕಾಲ್ ಕೋದುದು (ಕಾವ್ಯಸಾ. ೧೨). ೬. ಸೇರಿಕೊಳ್ಳು ; ಜತೆಗೂಡು : ಅಂತಿಂತುಗಳ್ ಪದಾಪೂರಣದೊಳ್ ಕೋವುವು (ಶಮದ. ೩೧೮).

[ದೇ. ॥ ತಮಿ. ಮಲ. ಕೋ ; ಕೊಡ. ಕೊಯ ; ತೆಲು. ಕೋವ, ಕ್ರೋನ ; ಕೋಲಾ. ನಾಯ್ಕಿ. ಕೊಂಚ್ ; ಪರ್ಜಿ. ಕೋಪ್]

**ಕೋ₂** 'ಕೊಳ್₁' ನೋ.

**ಕೋಂಟೆ, ಕೊಟ್ಟೆ₄, ಕೋಟೆ₁, ಕೋಟ್ಟೆ₁, ಕೋಟ್ಟೆ (ನಾ)** ಪೇಟೆಯ ಅಥವಾ ಪಟ್ಟಣದ ರಕ್ಷಣೆಗೋಸ್ಕರ ಕಟ್ಟಿದ ಭದ್ರವಾದ ಗೋಡೆಯ ಆವರಣ; ಎತ್ತರವೂ ಬಲವತ್ತರವೂ ಆದ ಸುತ್ತುಗೋಡೆ; ಪುರಪ್ರಾಕಾರ; ಕಿಲ್ಲೆ; ದುರ್ಗ: ಪೊಱಲ ಪಡುವಣ ದೆಸೆಯ ಕೋಂಟೆಯ ಪೊಱಗಣ ದೆಸೆಯೊಳ್ (ವಡ್ಡಾರಾ. ೧೩೪-೧೬); ಕೋಂಟೆಯ ಚೆಲ್ವು ಪೊಗೞಲಱಿದೆನಿಸಿರೆ ನೆಗೆದುದು ನಭಮನೆಯ್ದೆ ಮಿಳಿರ್ವ ಪತಾಕಾವಳಿ (ಪಂಪಭಾ. ೪-೧೦); ಭಯದಿಂದಂಜನಚೋರಂ ಪದಕಮನೀಡಾಡಿಯಾ ಪುರದ ಕೋಂಟೆಯಂ ವಿದ್ಯಾಧರಕರಣದಿ ಲಂಘಿಸಿ (ಧರ್ಮಾಮೃ. ೨-೧೨೬); ಮುಗಿಲ ಸಲೆ ವಿಸ್ತಾರದಿಂ ನೋಡಲಾ ನಗರದೆ ಕೋಂಟೆಯೊಪ್ಪುವುದು (ಜೀವಂಸಾಂ. ೧-೩೮). **ಕೊಟ್ಟೆ₄:** ಪರಿತಂದು ಪೊಕ್ಕೞಿಸುವೊಡನ್ನ ದೀಡು ಕೊಟ್ಟೆವಲ್ಲುದು (ಧರ್ಮಾಮೃ. ೬-೧೧೬); ನೀನೆಮಗೀಗ ಪಟ್ಟವ ಕಟ್ಟಿ ಸಾಗಿದರೆ ಕೊಟ್ಟೆವ ಮಾಡಿ ನಿಮ್ಮವರು ಬಾಗಿಲ ಹಾಕಿ ಇಟ್ಟು ಕೊಲ್ಲರೆ ಗುಂಡಿನೊಳಗೆ (ಹರಿಸಾಂ. ೨-೧೦೪); ಗಿರಿಕುಹರ ಕೊಟ್ಟೆ ಗಂಹರಗಳಲಿ ಕೋಹಿನಲಿ ಹಿರಿದು ಸೋಲಿಸಿ . . . ಹಿರಣ್ಯಯಕೆ ಬಂದು ದಿಟ್ಟರು ಪಾಳ್ಯಮಂ (ಕುರಂಗ. ೧೯-೨೨). **ಕೋಟೆ₁:** ಕೊಲ್ಲಿಪಲ್ಲವ ನೊಳಮ್ಬಂ ಪ್ನೊಳಮ್ಬರಾದಿತ್ಯನ್ನೆಸಸಲಾ ಕಾಳರಾಸರುವೆಟ್ಟು ಪೆಗುರ್ಗಂಜಿಯ ಕೋಟೆಯಾನ್ ರೋಹಿಸಿದಿಟ್ಟು (ಎಕ. VIII. ಸೊರಬ. ೧೦-೪; 800); ಇರ್ಕೆಯ ಕೋಟೆಯೊಪ್ಪಿರೆ ನೆಗಱ್ತೆಯ ಸ್ವರ್ಗಂ (ಧರ್ಮಾಮೃ. ೩-೨೩೧); ತ್ರಿಪುರದ ಕೋಟೆ ಬಲ್ಲಿತ್ತೆಂದರೆ ನೊಸಲಕಂಗಳಲುರುಹಿದನವ್ವಾ (ಮಹಾದೇ. ೧೫-೩); ಕೈಮಾಡಿ ಕೊಂಡರು ಸುದರ ಕೋಟೆಗಳ (ಕುಮಾರವ್ಯಾ. ೧-೫೨). ‘ಕೋಟೆಗಾಳೆಗ’ ಪರಾ. **ಕೋಟ್ಟೆ:** “ಕೋಟೆ (ಕೋಂಟೆ, ಕೊಟ್ಟೆ) – ಕೋಟ್ಟೆ, ಕೋಟೆ” (ತದ್ಭಕೋ. ೯). **ಕೋಟ್ಟೆ:** ಮಹಾರಾಜರುಂ ಬಾಣರಸರುಂ ಸೋರೆಮಟ್ಟೆ ಕೋಟ್ಟೆಂಯುಟ್ಟಲ್ಲಿ (ಎಇ. XXIV, ೨೬-೫; 885).

**ಕೋಂಟೆಕೊತ್ತಲ** = ಕೋಟೆ ಮತ್ತು ಅದರ ಮೇಲಿರುವ ಬುರುಜು: ಕೋಂಟೆಕೊತ್ತಲಗಳನ್ನು ಹೊಸಹೊಸ ಭದ್ರತೆಗಳ ಭ್ರಾಂತಿಯಿಂದ ಜೀರ್ಣೋದ್ಧಾರಮಾಡಿಕೊಳ್ಳುತ್ತ (ಮಂತ್ರಶ. ೬೯).

[ದೇ. ‖ ತಮಿ. ಕೋಟ್ಟೈ; ಮಲ. ಕೋಟ್ಟ; ತುಳು. ಕೊಡ. ಕೋಟೆ; ತೆಲು. ಕೋಟ. / ಸಂ. ಕೋಟ]

**ಕೋಂಟೆಕಾಳಗ** ‘ಕೋಂಟೆ ಗಾಳೆಗ’ ನೋ.

**ಕೋಂಟೆಕಾಱ, ಕೋಟೆಗಾಱ (ನಾ).** ಕೋಟೆಯ ರಕ್ಷಕ. ‘ದಿಗಂಗೋಂಟೆಕಾಱ’ ಪರಾ. **ಕೋಟೆಗಾಱ:** ಬೇಡ ಕೋಟೆಗಾಱರನು ತರಲಾಗದು (ಸೌಇಎ. ೧೯೩೧, ಮಂಗಳೂರು. ೩೩೬-೯; 1450).

[ಕೋಂಟೆ + -ಕಾಱ]

**ಕೋಂಟೆಕೋಲಾಹಲ, ಕೋಟೆಕೋಲಾಹಲ, ಕೋಟೆಕೋಳಾಹಳ (ನಾ).** ೧. ಶತ್ರುವಿನ ಕೋಟೆಯಲ್ಲಿ ಕೋಲಾಹಲವನ್ನು ಎಬ್ಬಿಸುವವನು; ಒಂದು ಬಿರುದು: ಕೋಂಟೆಕೋಲಾಹಲನೆನಿಪೀ ಬಿರುದನಾಂತು ರಾರಾಜಿಸಿದಂ (ಕಳನ್ಯ. ೨-೨೨). **ಕೋಟೆಕೋಲಾಹಲ:** ೦. ಪ್ರತ್ಯರ್ಥಿಧರಣೀಪಾಲ ಕೋಟೆಕೋಲಾಹಲಾಭಿಧಃ (ಎಕ. VII, ಶಿವಮೊ. ೨-೩೦; 1641). ೨. ಕಂಠೀರವ ನರಸರಾಜೇಂದ್ರನ ಸೈನ್ಯದಲ್ಲಿದ್ದ ಒಂದು ಕೋವಿಯ ಹೆಸರು: ಕೋಟೆಕೋಲಾಹಲ ಕಲಿವೀರಭದ್ರನು ಲೂಟಿಯ- ಕಣಭೈರವನು ವಿಸಾಟಿಸ ರಂಗನಾಥನು ವೈರಿಭಟಕುರುಪಟಳ ಬಲುಗೋವಿಯುಹುವು (ಕಂನಚ. ೬-೧೯). **ಕೋಟೆಕೋಳಾಹಳ:** ೧. ಶ್ರೀಮದ್ದಡವ ಮುರಾರಿ ಕೋಟೆಕೋಳಾಹಳ (ಸೌಇಎ. ೧೯೪೩, ೩೫೫; ಸು. 1546); ಶ್ರೀಮದ್ದಡವ ಮುರಾರಿ ಕೋಟೆಕೋಳಾಹಳ . . . ಶಿವಗುರು ಭಕ್ತಿ ಪಾರಾಯಣ (ಎಕ. VII, ಶಿವಮೊ. ೨೮-೬; 1670).

[ಕೋಂಟೆ + ಕೋಲಾಹಲ]

**ಕೋಂಟೆಗಾವಲ್, ಕೋಟೆಗಾವಲ್ (ನಾ).** ಕೋಟೆಯ ಕಾವಲು, —ಕಾಪು; ದುರ್ಗರಕ್ಷಣೆ: ಪುರತ್ರಯದ ಕೋಂಟೆಗಾವಲ ಪಟುಭಟರ್ ಜತನವೆಂದು ನೇಮಿಸಿ (ಚೆಬಪು. ೪೨-೯). **ಕೋಟೆಗಾವಲ್:** ಕೋಟೆಗಾವಲ ಭಟರ ವಿವಿಧಾಯುಧಂಗಳ (ಜೈಮಿಭಾ. ೧೬-೯).

[ಕೋಂಟೆ + ಕಾವಲ್₁]

**ಕೋಂಟೆಗಾಳಗ** ‘ಕೋಂಟೆಗಾಳೆಗ’ ನೋ.

**ಕೋಂಟೆಗಾಳೆಗ, ಕೋಂಟೆಕಾಳಗ, ಕೋಂಟೆಗಾಳಗ, ಕೋಟೆಗಾಳಗ, ಕೋಟೆಗಾಳೆಗ (ನಾ).** ಕೋಟೆಯ ಕಾಳೆಗ, —ಯುದ್ಧ: ಲಗ್ಗೆಯೊಟ್ಟೆಳದೋಟ್ಟೆಳವಾದುದು ಕೋಂಟೆಗಾಳೆ [ಪಾಠಾಂ. ೪]ಗಂ (ಚಂದ್ರಪ. ೫-೧೦೫); ಕಂಡರಾ ಸಮಯದೊಳ್ ಖಳರು ಗಜಬಜಿಸುವಾ ಖಂಡಳಾಪ್ತರ್ ಕೋಂಟೆ[ಪಾಠಾಂ. ಕೋಟೆ]ಗಾಳೆಗವರ್ೞೀಗ ಕೈಕೊಂಡರ್ (ಚೆಬಪು. ೪೨-೨೫). **ಕೋಂಟೆಕಾಳಗ:** ಅಸುರಮಾದುದು ಕೋಂಟೆಕಾಳಗಂ (ತ್ರಿಪುಎ. ೫-೯). **ಕೋಂಟೆಗಾಳಗ:** ಕವಿದಿಸುವಂಬು ವಾರ್ದಿಸುವ ಕಳ್ಕಡೆ ಕುತ್ತುವ ಕೊಂತ . . . ಲಗ್ಗೆಮಾಡುವ ಭಟಕೋಟಿ ಕೋಟಲೆಯುನಾಳ್ದಿರೆ ನೀಳ್ದುದು ಕೋಂಟೆಗಾಳಗಂ (ಪುಷ್ಪಪು. ೬-೬೪). **ಕೋಟೆಗಾಳಗ:** ಕೋಟೆಗಾಳಗದ ಪ್ರತಿಯೊಂದು ಅಂಗವನ್ನೂ ಕಣ್ಣಿಗೆ ಕಟ್ಟುವಂತೆ ಸಂಪೂರ್ಣವಾಗಿ ಚಿತ್ರಿಸಿದವನೆಂದರೆ ವಿರೂಪಾಕ್ಷ ಪಂಡಿತನು ಒಬ್ಬನೇ ಒಬ್ಬ ಎಂದು ಹೇಳಬಹುದು (ಕರ್ನಾಜ. ೪೬). **ಕೋಟೆಗಾಳೆಗ:** ರಸವಾದಿಯಂತೆ ಕೊಲ್ಲಿಸುತ್ತುಂ . . . ಕೋಟೆಗಾಳೆಗದಂತೆ ಪತ್ತೆಸುತ್ತುಂ (ಧರ್ಮಾಮೃ. ೨-೬೧). [ಕೋಂಟೆ + ಕಾಳೆಗ]

**ಕೋಂಟೆವಱೆ (ನಾ).** ಕೋಟೆಯಲ್ಲಿ ಬಾರಿಸುವ ಒಂದು ಬಗೆಯ ಚರ್ಮವಾದ್ಯ, —ನಗಾರಿ: ಬಿಡದೆ ಕೂಗುವ ಪಹರೆ ತಿರುಗುತಿಹ ಪಂಜುಗಳ್ ಗಡಬಡಿಪ ಕೋಂಟೆವಱೆ ದನಿಗೆಯ್ತ ಪಟಲುಗಳ್ (ಚೆಬಪು. ೪೨-೧೦). [ಕೋಂಟೆ + ಪಱೆ₁]

**ಕೋಕ₁ (ನಾ).** ೧. ಜಕ್ಕವಕ್ಕಿ; ಚಕ್ರವಾಕ: “ಕೋಕಃ, ಚಕ್ರಃ, ಚಕ್ರವಾಕಃ, ರಥಾಂಗಃ – ಈ ೪ ಜಕ್ಕವಕ್ಕಿ” (ಹಲಾಯು. ೪೧-೯೧); ಕೋಕಂ ಶೋಕಂ ಪಡೆಯೆ . . . ರಂಜಿಸಿತಿರುಳ್ (ಪುಷ್ಪಪು. ೮-೧೩); ವಿರಹಂ ಕೋಕಂಗಳೊಳ್ (ಚಕಕು. ೬-೪); ಅಲ್ಲಲ್ಲಿ ಕರಂ ನಿಂದು ನೆನೆದು ಪುಯ್ಯುಡು ಕೋಕಂ (ರಾಜಶೇ. ೧೧-೧೬). ೨. ತೋಳ; ಈಹಾಮೃಗ: “ಅರಣ್ಯಶ್ವಾ, ಕೋಕಃ, ಈಹಾಮೃಗಃ, ವೃಕಃ – ಈ ೪ ತೋಳಂ” (ಹಲಾಯು. ೩೮-೬೫); ಬಲೆ ಪಱಿವ ಕೋಕನಂತೊರ್ವ ವನಪಾಲಕಂ ಪೋಗಿ ದೇವೇಂದ್ರನಂ ಕಂಡು (ಪಂಪಭಾ. ೫-೯೩ ವ). ೩. ಕೋಗಿಲೆ; ಪಿಕ: ಕುಕಿಲ್ವ ನಲಿವ ಕೋಕದಿಂ (ಪಂಪಭಾ. ೧-೫೮). ೪. ಕಪ್ಪೆ; ಭೇಕ. ೫. ಖರ್ಜೂರದ ಮರ. ೬. ಹಲ್ಲಿ; ಗೌಳಿ. ೭. ಮರ; ವೃಕ್ಷ. ೮. ಶ್ರೇಷ್ಠ; ಉತ್ತಮವಾದುದು. ೯. ಕಾಮಶಾಸ್ತ್ರವನ್ನು ಬರೆದ ಒಬ್ಬ ಪಂಡಿತನ ಹೆಸರು. ‘ಕಕ್ಕೋಕ’, ‘ಕೋಕಶಾಸ್ತ್ರ’ ಪರಾ. “ಕ್ಷಿತಿಜದೊಳು ಖರ್ಜೂರದೊಳು ಕೋಕನೊಳು ಭೇಕತತಿಯೊಳು, ರಥಾಂಗದೊಳು ಜ್ಯೇಷ್ಠೆಯೊಳು ಕೋಕಮಕ್ಕು” (ಮಂಗರಾ. ೧೫೨-೫೮); “ತರುಖರ್ಜೂರವನಶ್ವ ಚಕ್ರಯುಗಭೇಕಂ ಶ್ರೇಷ್ಠಮುಂ ಕೋಕಮಕ್ಕು” (ನಾನಾರ. ೧೯). [ಸಂ.]

(ನಾ). ಒಳಗಿನ ತೆಳು ಪದರ ಅಂಟಿಕೊಂಡಿರುವ ಅಡಕೆ; ಕೀಳುಅಡಕೆ: ಗೋಟಡಿಕೆಗಿಂತ ಕೋಕಕ್ಕೆ ಬೆಲೆ ಕಡಿಮೆ (ಉಕ).

[← ಮರಾ. ಖೋಕಾ, ಖೋಖಾ]

**ಕೋಕಕಟ್ಟಳೆ** (ನಾ). ಕಕ್ಕೋಕಶಾಸ್ತ್ರದ ನಿಯಮ; ಕಾಮಶಾಸ್ತ್ರದ ಸೂತ್ರ: ಎಲ್ಲಿ ನೋಡಲು ಭರತ ಕೋಕಕಟ್ಟಳೆಗಳನು ಸೂಲ್ಲಿಸುವ ಬೆಲೆವೆಣ್ಗಳು (ಪ್ರೌಢರಾ. ೬-೮). [ಕೋಕ₁ + ಕಟ್ಟಳೆ]

**ಕೋಕನದ** (ನಾ). ಕೆಂಪುತಾವರೆ; ಕೆಂದಾವರೆ: "ಅರುಣಾಬ್ಜಮೆನೆ ಕೋಕನದಮೆನಲ್ ಕೆಂಪುದಾವರೆಯಕ್ಕು" (ಮಂಗರಾ. ೧೨೪-೧೬); ಆ ಕಾಂತೆಯ ಮೃದುತರ ಪದ ಕೋಕನದಂ ತನ್ನ ರುಚಿಯಿನೊದವಿಸಿ ರಾಗೋದ್ರೇಕಮಂ (ಮಲ್ಲಿಪು. ೬-೫೭); ರತ್ನರಾಜಿ ಪೋಣಾದ್ರಿಗೆ ಪೂಗೊಳಕ್ಕೆ ನವಕೋಕನದಂ (ಉದ್ಭಟ. ೧-೯೩). [ಸಂ.]

**ಕೋಕನದಗರ್ಭ** (ನಾ). ತಾವರೆಯಲ್ಲಿ ಹುಟ್ಟಿದವನು; ಬ್ರಹ್ಮ: ಕೋಕನದಗರ್ಭನಿಂ ವಾಲ್ಮೀಕಿಯ ಕಪಿ ಮುನಿನಿಕಾಯದೊಳ್ (ಜಗವಿ. ೧-೭). [ಕೋಕನದ + ಗರ್ಭ]

**ಕೋಕನದಜಠರ** (ನಾ). ಹೊಟ್ಟೆಯ ಮೇಲೆ ತಾವರೆಯನ್ನುಳ್ಳವನು; ವಿಷ್ಣು: ಕೋಕನದಜಠರನಂ ನಿರ್ವ್ಯಾಕುಳಮೆಂತೆಂದು ಧರ್ಮತನಯಂ ನುಡಿದಂ (ಕಂಪಭಾ. ೯-೧೪). [ಕೋಕನದ + ಜಠರ]

**ಕೋಕನದಪ್ರದ್ವಿಷ** (ನಾ).= ಕೋಕನದ ವೈರಿ ೧: ದಿನನಾಥಾಲಯ ಲಗ್ನದೊಳ್ ಶುಭಬುಧತ್ರಿಂಶಾಂಶಮಾದಂದು ಕೋಕನದ ಪ್ರದ್ವಿಷನಲ್ಲಿ ಕೂಡೆ ಪುರುಷಾಚಾರಾಢ್ಯ (ಜಾತಕ. ೨೨-೭).[<ಸಂ. ಕೋಕನದಪ್ರದ್ವಿಷ್]

**ಕೋಕನದವೈರಿ** (ನಾ). ೧. ಕೆಂದಾವರೆಯ ಶತ್ರು; ಚಂದ್ರ: (ಕ). ೨. [ಛಂದ] ಒಂದು ಅಕ್ಷರಗಣ; ಭಗಣ: ಕೋಕನದ ವೈರಿ ದಿನಪಂಗಾ ಕಡೆಗೆ ವಾಯು ಬರೆ ಕೇಲಾ ಕಮಲಲೋಚನೆ ಪೆಸರ್ ಸಾಕಿಗನಿನಾದುದುದಯಂ (ಛಂದೋಂಬು. ೨-೫೦) [ಕೋಕನದ + ವೈರಿ]

**ಕೋಕಮ** (ನಾ). ಒಂದು ಬಗೆಯ ಹುಳಿ ಹಣ್ಣು; ಅಮಸೋಲು; ಉಂಡೆಹುಳಿ (ಕರಾ): ಮುಂಬಯಿ ೨೮ ಮಣದ ಖಂಡಗದ . . . ಜೇನಸುಗಳು ೧. ಅಮಸೂಲ (ಕೋಕಮ); ೨ ಕವಡಿ (ಮುಂಬವ್ಯಾ. ೧೨೧).

[← ಮರಾ. ಕೋಕಮ್]

**ಕೋಕರ** (ನಾ). ಒಬ್ಬಾತನ ಹೆಸರು: ಬಳಗಾಜರ ಕೋಕರಂ ಪುನುವಲವಳ್ಳಿಯಲಿಬ್ದು ಪುಯ್ಯಲಂ ಪರಿದು ಮಾರ್ಬ್ಬಲಮಂ ಕಲ್ಲಿಜಾದು ಸ್ವರ್ಗ್ಗಾಲಯಕ್ಕೆ ಸನ್ದಂ (ಎಕ. VIII, ಸೊರಬ. ೫೩೦-೫; 979). [?]

**ಕೋಕಶಾಸ್ತ್ರ** (ನಾ). ಕೋಕನೆಂಬ ವಿದ್ವಾಂಸನಿಂದ ರಚಿಸಲ್ಪಟ್ಟಿತೆಂದು ನಂಬಲಾದ ಶಾಸ್ತ್ರ; ಕಾಮಶಾಸ್ತ್ರ: (ಕ).

[ಕೋಕ₁ + ಶಾಸ್ತ್ರ]

**ಕೋಕಿ** (ನಾ). ಹೆಣ್ಣು ಚಕ್ರವಾಕ ಪಕ್ಷಿ; ಹೆಣ್ಣು ಜಕ್ಕವಕ್ಕಿ: ಕುಜೆಯಲೊಲ್ಲದು ನವಿಲ್ ಬೆರೆಯಲೊಲ್ಲದು ಕೋಕಿ (ಜೈಮಿಭಾ. ೧೯-೩೩); ಕೋಗಿಲೆ ಗಿಡಗ ಕೋಕಿಗಳ್ ಕಬ್ಬಾರೆ ಪದ್ದು ಪೆಣ್ಣಂಚೆ (ಸಿದ್ಧಕಾ. ೬-೩೩); ಶಿವನ ಊರುಪಂಜದಿಂದಾದ ದಾಳಿಗಳು, ಹರನ ಕರನಖದಿಂದಾದ ಕೋಕಿಗಳು (ಶರಚ. ೨೮). [ಸಂ. ಕೋಕೀ]

**ಕೋಕಿಲ, ಕೋಕಿಳ** (ನಾ). ಕೋಗಿಲೆ; ಪರಪುಟ್ಟ; ಪಿಕ: "ಪಡಿಯಜವಕ್ಕಿಯೆನಲ್ಕೆ ಕೋಕಿಲನಕ್ಕುಂ" (ರನ್ನಕಂ. ೬); ಬಿರಯಿಯಂ ಮತ್ತಾಳಿನೀ ಕೋಕಿಲ ಧ್ವನಿಯಿಂದಂಜಿಸುತುಂ (ಕಾದಂಬ. ೭೮೧); ವಿಯೋಗಿಗಳೆಂಬ ಮೃಗಂಗಳಂ ಭಯಂಗೊಳಿಸಿದುದುತ್ಕಕೀರ ಮದಕೋಕಿಲ ಗರ್ಜಿತ ತರ್ಜಿತಂಗಳಿಂ (ಅಜಿಪು. ೬-೨೩); ಕೋಕಿಲಂ ಕೊನರೆಂ ಕರ್ಚಿ ಕೊಪಳ್ ಸರಂಗೆಡೆದುದು (ಅನಂಪು. ೬-೭೨); ಕೋಕಿಲಂಗಳ್ ಕೊರಲ್ದೆರೆಪು ಮಾಡೆ (ಭಾವಚಿಂ. ೪-೧೭). **ಕೋಕಿಳ**: "ಪಿಕಂ ಕೋಕಿಳಂ ಕಳಕಂಠಮನ್ಯಭೃತಕಮುಸ್ಕಪುಷ್ಪಂ ಕೋಗಿಲೆಯೆಡೆನಿಕ್ಕುಂ" (ಮಂಗರಾ. ೫೦-೩); ವಕ್ರವಾಕ್ಯಂ ಕೋಕಿಳಂಗಳೊಳಲ್ಲದೆ . . . ಜನಂಗಳೊಳಿಲ್ಲ (ಜಗವಿ. ೨-೧ ವ). [ಸಂ.]

**ಕೋಕಿಲತಂತ್ರ** (ನಾ). (ಕೋಕಿಲೆಯಂತೆ) ತನ್ನ ವಸ್ತುವನ್ನು ಹೆರವರು ಕಾಪಿಡುವಂತೆ ಮಾಡುವ ಯುಕ್ತಿ, —ಚಮತ್ಕಾರ: ಶ್ರೀನಿವಾಸಮೂರ್ತಿಗಳು ಗ್ರಂಥಲೇಖನಕ್ಕೆ ಮೊದಲು ಮಾಡಿದ ಕಾಲದಲ್ಲಿ ಕೋಕಿಲತಂತ್ರ ಕನ್ನಡ ಸಾಹಿತ್ಯ ಲೋಕದಲ್ಲಿ ಇನ್ನೂ ಮೊದಲಾಗಿರಲಿಲ್ಲ (ಮಹಾಗ. i, ಪ್ರಸ್ತಾವನೆ.). [ಕೋಕಿಲ + ತಂತ್ರ]

**ಕೋಕಿಲನಿನದ** (ನಾ). ಕೋಗಿಲೆಯ ಧ್ವನಿ, —ಇಂಚರ: "ಪುಗಿಲ್ ಪುಗಿಲೆನಪಾರಾವರ ಕೋಕಿಲನಿನದಂ" (ಚತುಪ. ೯೫).

[ಕೋಕಿಲ + ನಿನದ]

**ಕೋಕಿಲಪ್ರಿಯ** (ನಾ). [ಸಂಗೀತ] ಒಂದು ತಾಳದ ಹೆಸರು: ಅವುಗಳೊಳು ಚಂಚತ್ಪುಟ . . . ಕೋಕಿಲಪ್ರಿಯ . . . ಜಯಾಳವೆಂಬಿವು ಮೊದಲಾದ ನೂಱೆಂಟು ತಾಳಂಗಳುಂ (ವಿವೇಕ. ೨೩೫).

[ಕೋಕಿಲ + ಪ್ರಿಯ]

**ಕೋಕಿಲಸ್ವನ** (ನಾ). = ಕೋಕಿಲನಿನದ: ಅನುಲೇಪಾತಿಶಯ ಪ್ರಭಾವದಿನತಾಂಗೋಪಾಂಗಮುಕ್ಕೋಕಿಲಸ್ವನ ಲೀಲಾ ಲಲಿತೋರು ಚಾರುನಿನದಂ (ಸುಕುಮಾ. ೫-೩೬). [ಕೋಕಿಲ + ಸ್ವನ]

**ಕೋಕಿಲಾಕ್ಷ** (ನಾ). ಕೊಳಗುಳಿಕೆ ಗಿಡ; ಇಕ್ಷುಗಂಧೆ: "ಇಕ್ಷುಗಂಧಾ, ಕಾಂಡೇಕ್ಷುಃ, ಕೋಕಿಲಾಕ್ಷಃ, ಇಕ್ಷುರಃ, ಕ್ಷುರಃ —ಈ ಐದೂ ವಂಕೆ ಹೆಸರುಗಳು." (ಸಿದ್ಧಾಂತಿ. ೧೧೯). [ಸಂ.]

**ಕೋಕಿಲಾರವ** (ನಾ).= ಕೋಕಿಲನಿನದ: ಕೋಕಿಲಾರವಮದು ಬೀರ ಮದ್ದಳೆಯ ನಿಸ್ವನಮಾಗಿರೆ (ಚಂದ್ರಪು. ೭-೯೨). [ಕೋಕಿಲ + ಆರವ]

**ಕೋಕಿಲಾಸನ** (ನಾ). [ಯೋಗ] ಆಸನಗಳಲ್ಲೊಂದು: ಮುಖ್ಯವಾದ ಕೆಲವು ಆಸನಗಳು — ೧. ಉತ್ತಾನಾಸನ . . . ೪೬. ಕೋಕಿಲಾಸನ . . . ೭೯. ಭೈರವಾಸನ ಇತ್ಯಾದಿಗಳನೇಕವಿವೆ (ಭಾರದ. ೧೬೭).

[ಕೋಕಿಲ + ಆಸನ]

**ಕೋಕಿಲೆ** (ನಾ). = ಕೋಕಿಲ: "ವನಪ್ರಿಯಃ, ಪರಭೃತಃ, ಕೋಕಿಲಃ, ಪಿಕಃ —ಈ ೪ ಕೋಕಿಲೆ" (ನಾಚಿರಾ. ೧೧೯). [ಸಂ. ಕೋಕಿಲ]

**ಕೋಕಿಳ** 'ಕೋಕಿಲ' ನೋ.

**ಕೋಕಿಹಾರಿಕೆ** (ನಾ). (?): ಕೈಯಣ ಗಿಂಡಿಯು ಕೊಂಕುಳ ಪೆಟ್ಟಿಗೆ ಕಲ್ಲಿಯುಹುದು ತಲೆಕಟ್ಟು ಬಯ್ಯಗಳೆಂಬವು ಪರಿಪರಿ ನೋಡಲು ಕೋಕಿಹಾರಿಕೆ ಅಳವಟ್ಟು ಜ್ಞಾನವು ಇಲ್ಲವು ಪ್ರಸ್ತದ ಮನೆಯೊಳು ಹೋಳಿಗೆ ತುಪ್ಪವು ಗದಿಕು ಧ್ಯಾನವಿಲ್ಲವು ಮೌನವಿಲ್ಲವು ಯಮನ ಕೈಯಿಂದಾ ದುಬುಕು (ಚಿದಾಕೋ. ೪೨-೪). [?]

**ಕೋಕೋ** (ನಾ). ೧. ಪಾನೀಯ ಮೊದಲಾದುವುಗಳಿಗೆ ಉಪಯೋಗವಾಗುವ ಬೀಜಗಳನ್ನು ಕೊಡುವ ಒಂದು ಜಾತಿಯ ಗಿಡ. ೨. ಕೋಕೋ ಬೀಜದಿಂದ ಮಾಡಿದ ಪಾನೀಯ: ಕಾಫಿಗೆ ಬದಲು ಕೋಕೋ ಕುಡಿದು (ಋಷಿ). [← ಇಂ. Cocoa]

**ಕೋಗಳಿ, ಕೊಂಗಳ್ಳಿ, ಕೊಗಳಿ, ಕೊಗಳೆ, ಕೊಗೆಟು, ಕೊಗುಳಿ** (ನಾ). ಒಂದು ಸೀಮೆಯ ಹೆಸರು. ℙ ಈಗಿನ ಬಳ್ಳಾರಿ ಜಿಲ್ಲೆಯ ಕೋಗಳಿ: ಶ್ರೀಮತ್[ಕೇ] × [ಕ]ಳ್ಯಂ ಬಲ್ಲಹನ ಪದ[ಯಂ] [ಕೋಗ]ಳಿಯಾಯ್ಯೂಱುಮಂ ಮಾಸಿಯವಾಡಿ[ನೂಱ]ನಾಲ್ವತ್ತುಮ ನಾಳುತ್ತಮಿರ್ದು (ಸೌಇಇ. XI-i, ೨೨-೭; 897); ಸ್ವಸ್ತಿ ಶ್ರೀಮತು ನಾಲ್ಕುಯುಗದ ಪೊಳಲು ಕೋಗಳಿಯ ಚಕ್ರಕಾ × × × (ಸೌಇಇ. XI-i, ೮೬-೫೦; 1050); ನೊಳಂಬವಾಡಿ ಮೂವತ್ತಿರ್ಛಾಸಿರಕ್ಕಂ ಸಿಪಾಮನಯೆಪ್ಪಿಯುಂ ಕೋಗಳಿಯಯ್ನೂಱಕಂ ಮೊದಲನ್ನ ನೆಗಬ್ದ ರಾಜಧಾನಿ ಪಟ್ಟಣಂಗಳ ಚಕ್ರವರ್ತ್ತಿ ಕೋಗಳಿಯ ಪೆರ್ಮ್ಮಯೆಂತೆಂದಡೆ (ಸೌಇಇ. IX-i, ೩೧೭-೨೭; 13ನೆಯ ಶತ).

**ಕೊಂಗಳ್ಳಿ₂ :** ಕೊಂಗಳಿಯಯ್ಯೂಱುಂ ಕದಂಬಳಿಗೆ ಸಾಸಿರಮುಂ ಬಲ್ಲಕುನ್ದ ಮೂನೂಱುಂ (ಎಕ. XI, ದಾವಣ. ೨೦–೪; 1045). **ಕೊಗಳಿ :** ಕೊಗ[ಪಾ ಕಾಂ. ಗು]ಳಿಯುನಾಳ್ವ ಕ್ರೌಂಚನೆಂಬರಸಂಗೆ (ವಡ್ಡಾರಾ. ೧೧೬–೧೫); ಇಮ್ಮಡಿ ನೊಳಂಬಂ ಬಲ್ಲಕುಂದೆ ೩೦೦ ಕೊಗಳಿ ೫೦೦ ಕದಂಬಳಿಂಗೆ ಸಾಸಿರವುಮನಾಳುತ್ತಮಿರೆ (ಎಕ. XI, ದಾವಣ. ೧೯–೪; 1043). **ಕೊಗಳಿ :** ಈಶಾನ್ಯ ಕೊಗಳಿಯ ಹಾಳ ಹೊಲವೇರಿಯ ಹಳ್ಳದಿಂ (ಸೌಇಇ. IX–i, ೨೨೮–೧೫; 1133). **ಕೊಗಳಿ :** ಪಡೆವೋಗಿ ಕೊಯತ್ತೂರಿಱದಲ್ಲಿ ಕೊಗಳಿಯ ಒಕ್ಕಲ್ ಶ್ರೀಎಮ್ಮೆಯರ ಮಗ ಬೊಲ್ಲಗಂಗ ಗಾಮುಣ್ಡ ಸಿಱಿದು ಬಿಟ್ಟನ್ (ಎಕ. X, ಬೌರಿಂಗ್. ೧೩–೪; 890). **ಕೊಗುಳಿ :** ಮೇಲಿನ 'ವಡ್ಡಾರಾ.' ಪ್ರಯೋಗದ ಪಾಠಾಂತರವನ್ನು ನೋಡಿ.

ಕೋಗಳಿ ಗಡಿಂಬ = ಕೋಗಳಿಯ ಸುತ್ತಮುತ್ತ ಪ್ರಚಾರದಲ್ಲಿದ್ದ ಒಂದು ಅಳತೆಗೋಲು : ಬಡಗಲು ಕೋಗಳಿಗಡಿಂಬದ ಉತ್ಕೃಷ್ಟವಪ್ಪರೆಯ (ಸೌಇಇ. IX–i, ೨೪೮–೨೪; 1147). [?]

**ಕೋಗಿಯೂರ್** (ನಾ). ಒಂದು ಊರಿನ ಹೆಸರು : ಕೋಗಿಯೂರ ಬಯಲೊಳ್ಪಾಳ್ಗಿಟ್ಟು ಕೊಣ್ಡಯ್ದಿದಂ (ಎಕ. XIV, ಎಡತೊ. ೩೧–೮; 908). [ಕೋಗಿ ? + ಊರ್]

**ಕೋಗಿರು** 'ಕೋಗೀರು' ನೋ.

**ಕೋಗಿಲು** 'ಕೋಗಿಲೆ' ನೋ.

**ಕೋಗಿಲೆ, ಕೋಗಿಲು** (ನಾ). ೧. = ಕೋಕಿಲ : "ಕಾಮ್ರಾಕ್ಷಃ – ಕೋಗಿಲೆ" (ಒಷಧಿ. ೩೭); ಕೋಗಿಲೆ ಚಾದಗೆ ಪೋದಗೆ ಮೂಗಿಗಲಿಂ ಜಂಚೆಕೊಂಚೆ . . . ಬಲಾಕೆ ಲಾವುಗೆ ಸೇನಂ (ಕಾವ್ಯಸಾ.೧೦೪೪ ಶೂದ್ರಕ); ಮಾವಿನಂಕುರಮನೆ ಕರ್ಚಿ ಬಿಚ್ಚಳಿಪ ಕೋಗಿಲೆ (ಪಂಪಭಾ. ೫–೧೧); ಕುರುಡಿಪ ಕಾಗೆಯುಂ ನಲಿವ ಕೋಗಿಲೆಯುಂ ಕೊಱದೆಯ್ದೆ ವೈರಮಂ (ಧರ್ಮಾಮೃ. ೩–೯೦); ಗಳಹುವರಗಿಳಿವಿಂಡಿನಲಿ ಹೆಕ್ಕಳಿಪ ಕೋಗಿಲೆಗಳಲಿ (ತೊರರಾ. ೧–೯–೧೧); ಕಾಗೆ ಕರಿದಾದರೆ ಕೋಗಿಲೆ ಅದೀತೆ (ಗಾದೆ). ೨. ಒಂದು ಜಾತಿಯ ಹುಳು : ಕಟಿಯ ದಾಟುಕಮುಮನುಷ್ಣಜಲವಣಸಮೇತಮಿಕ್ಕು ಸುಂಠಿಯುನರೆದಾಗಳೆ ನಸ್ಯಾಂಜನವಿಧಿಯಿಂದಲೆಗುಂ ಕೋಗಿಲೆಯುನಡಸಿ ಮೆಲ್ದಾ ವಿಷಮುಂ (ಅಶ್ವಶಾ. ೧೧–೩೪); ಕೋಗಿಲೆಯುಂ ತಿಂದ ಕುದುರೆ ಮೇಲುಸುರನಿಕ್ಕುವುದು (ಅಶ್ವವೈ. ೧೨–೨೦ ಟೀಕು). ೩. ಜಾನುವಾರುಗಳಿಗೆ ಬರುವ ಒಂದು ಬಗೆಯ ರೋಗ : ನೆರೆ ಪಟ್ಟುಯುಕುಪ್ಪಮು ಮಂತರದಿಕ್ಕುಗೆಪಱದುಪೋಕುಮಾ ಕೋಗಿಲೆಯುಂ (ಲೋಕೋಪ. ೯–೨೧೧). ೪. = ಕೋಗಿಲೆಬಾಳೆ. 'ಕೋಗಿಲೆಯೆಲೆ' ಪರಾ. ೫. (ಕರಾ) ಮಾವಿನ ಹಣ್ಣಿನ ಓಟೆಯ ಒಳಗಿನ ತಿರುಳು. **ಕೋಗಿಲು :** ೧. "ಮತಃ – ಕೋಗಿಲು, ಅನಮಱ, ಕೋಱ, ಮಗ್ಗಿ" (ಒಷಧಿ. ೯೭–೧೧೪). [< ಸಂ. ಕೋಕಿಲ]

**ಕೋಗಿಲೆಗಿಡ** (ನಾ). = ಕೋಗಿಲೆಬಾಳೆ : (*). [ಕೋಗಿಲೆ + ಗಿಡ (< ಗಿಡು)]

**ಕೋಗಿಲೆಹುಳು** (ನಾ). = ಕೋಗಿಲೆ ೨ : ಕೋಗಿಲೆಹುಳು ತಿಂದ ರೋಗ (ಅಶ್ವಶಾ. ೧೧–೩೩). [ಕೋಗಿಲೆ + ಹುಳು₁ (< ಪುೞು)]

**ಕೋಗಿಲೆಬಾಳೆ** (ನಾ). ಅಲಂಕಾರಕ್ಕಾಗಿ ಹೂದೋಟ ಮೊದಲಾದ ಕಡೆಗಳಲ್ಲಿ ಬೆಳೆಯಿಸುವ, ಬಣ್ಣಬಣ್ಣದ ಹೂಗಳನ್ನು ಬಿಡುವ ಪುಟ್ಟ ಬಾಳೆಗಿಡಗಳನ್ನು ಹೋಲುವ ಗಿಡ; ಕಾಬಾಳೆ (ಉಕ). [ಕೋಗಿಲೆ+ ಬಾಳೆ₁ (< ಬಾೞೆ)]

**ಕೋಗಿಲೆಯೆಲೆ** (ನಾ). ಕೋಗಿಲೆ ಗಿಡದ ಎಲೆ; ಕುವ್ವೆಯೆಲೆ : (*). [ಕೋಗಿಲೆ + ಎಲೆ₁]

**ಕೋಗಿಲೆವಱಿ** (ನಾ). ಕೋಗಿಲೆಯ ಮರಿ; ಮರಿ ಕೋಗಿಲೆ : ಕೋಗಿಲೆವಱಿ ಮಾಮರದೊಳ್ (ಶಬ್ದಾನು. ೫೩ ವ್ಯಾಖ್ಯಾ). [ಕೋಗಿಲೆ + ಮಱಿ]

**ಕೋಗಿಲೆವೆಣ್** (ನಾ). ಹೆಣ್ಣು ಕೋಗಿಲೆ : ಮದೋತ್ಸವದೆ ಕೋಗಿಲೆವೆಣ್ ಗಳಪಂ ನೆಗಱ್ಚುವಂತೆ (ಜಗವಿ. ೧೬–೧೧೭); ಸಲಹಿ ಪೊದಲೆ ಮರಿಯಂ ಕೋಗಿಲೆವೆಣ್ ಕಾಕಂಗಳಿಂದೆ ಪಾರುವವರೆಗಂ (ಶಾಕುಂತ. ೭೦–೧೨೨). [ಕೋಗಿಲೆ + ಪೆಣ್]

**ಕೋಗೀರು, ಕೋಗಿರು, ಖೋಗೀರು** (ನಾ). ೧. ಜೀನು; ಕುದುರೆಯ ಬೆನ್ನಮೇಲೆ ಹಾಕುವ ತಡಿ, —ದಟ್ಟವಾದ ಮೆತ್ತೆ; ಥಡಿ : ಬಸವನೂ ತನ್ನ ಕುದುರೆಯನ್ನು ನಿಲ್ಲಿಸಿ ಕೋಗೀರು ಸೇದು ಹಿಂದಕ್ಕೆ ಸರಿಸಿದನು (ಚಿಕರಾ. ೩೪೭); ಕುದುರೆಯ ಮಾತಂತೂ ಆಯಿತು. ಇದರ ಕೋಗೀರು ತಂಗು ಮುಂತಾದ ಸಾಮಾನುಗಳನ್ನು ನೀವು ಹೊರಬೇಕೋ ನಾನು ಹೊರಬೇಕೋ . . . ಅಂದನು (ಕಥಾಮಂ. IV, ೯೫). ೨. (ಆಲಂ) ಸವಾರಿ ಮಾಡುವುದು; ಅಧಿಕಾರ ನಡೆಸುವುದು : ಸೋದರಸಂಬಂಧ . . . ಹೇಳಿದಹಾಗೆ ಕೇಳಿಕೊಂಡಿರುತ್ತೆ ಅಂತ ಮೆಚ್ಚಿ ಮೆಚ್ಚಿ ಇವಳನ್ನು ತಂದರೆ ನನ್ನಮೇಲೇ ಕೋಗೀರು (ಶ್ರೀಕಥೆ. ೧೫೦). **ಕೋಗಿರು :** ೧. ಕೋಗಿರು ಕೆಳಗಣ ಸಂಣ ಪಟ್ಟಿ (ಎಕ. XIV, ನಂಜನ. ೨೮೯–೨; 1847). ೨. ಅತ್ತೆಯ ಮೇಲೆ ಕೋಗಿರು ಥರ್ತಿಮಾಡುವುದೇ ತನ್ನ ಕೆಲಸವೆಂದು ಅವರು ತಿಳಿದಿರಲಿಲ್ಲ (ಸಂಧ್ಯಾರಾ. ೧೩). **ಖೋಗೀರು :** ೧. ತಾವು ನಿಶಿರಾತ್ರಿಯಲ್ಲಿ ಎದ್ದು ಕುದುರೆಗೆ ತಾವೇ ಖೋಗೀರು ಹಾಕಿಕೊಂಡು ಹೊರಟಾಗ ಪೂರ್ತಿ ಮಂದಟ್ಟಾಯಿತು (ಸಕತ. ೭೦). [← ಪಾರ. ಮರಾ. ಹಿಂ. ಖೋಗೀರ]

**ಕೋಗು** 'ಕೋಹು₁' ನೋ.

**ಕೋಗುಂಟೆ** (ನಾ). (?) : ಹನುಮಾನೆಂಬೋನು ಚಿಕ್ಕೋನು ದೊಡ್ಡೋನು ಕೋಗುಂಟೆ ಮೇಲೆ ಕೊನೆನಾಮ ಇಕ್ಕೊಂಡು ಚುಕ್ಕಿ ಬೆಳ್ಕಾಲ್ಲೀ ಹೊರಟಾನು (ಹುಟ್ಟಿಹ. ೩೩). [?]

**ಕೋಗುಂಡೆ** (ನಾ). ಒಂದು ಸ್ಥಳದ ಹೆಸರು (?) : ತಣಗೆರೆನಾಯಕರು ಕೋಗುಂಡೆ ಬಸವಪ ದೇವರಿಗೆ ಕೊಟ್ಟ ಹೊಂನು (ಎಕ. VII, ಚನ್ನಗಿ. ೧೪–೪ ; ?). [?]

**ಕೋಗುರಿವಾಜು** (ನಾ). ಗೇಣಿದಾರನು ಪ್ರತಿ ವರ್ಷ ಒಡೆಯನಿಗೆ ತೆರುವ ಗೇಣಿಯ ಕ್ರಮ, —ಪದ್ಧತಿ : ಎಲ್ಲಾವಕ್ಕೂ ಕೊಟ್ಟಾಗೆ ಕೋಗುರಿವಾಜು ಪ್ರಕಾರ ಗೇಣಿ ಕೊಡೂಕೆ ನಿಂಗಿಷ್ಟ ಇದ್ರೆ ಜಮಾನು ಇಟ್ಗ (ಪಂಜಪಂ. ೭೨). [ಕೋಗು (< ಕೋಹು₁) + ರಿವಾಜು]

**ಕೋಗೋಡು** (ನಾ). ಒಂದು ಊರಿನ ಹೆಸರು : ಕೋಗೋಡ ನೊಕ್ಕಲ್ತಗೆರೆನಾಡ ಕೂಡಿಬ್ದಲ್ಲಿ (ಮೈಆರಿ. ೧೯೩೯, ೩೩–೧ ; 1034); ಕೋಗೋಡಿನ ಸಕಲಗಾವುಣ್ಡುಗಳುಮ್ (ಮೈಆರಿ. ೧೯೨೪, ೧೮–೨ ; ?). [?]

**ಕೋಚ್** 'ಕೋಚು₃' ನೋ.

**ಕೋಚಿ₁** 'ಕೋಸು₂' ನೋ.

**ಕೋಚ₂** (ನಾ). ೧. ಒಣಗುವುದು; ಶುಷ್ಕವಾಗುವುದು; ಇಂಗುವುದು. ೨. ಸಂಕೋಚ ಹೊಂದುವಿಕೆ; ಕುಗ್ಗುವಿಕೆ. ೩. ವಕ್ರವಾಗುವಿಕೆ; ಬಗ್ಗಿಸುವಿಕೆ. ೪. ಕದಿಯುವಿಕೆ. [ಸಂ.]

**ಕೋಚನ** (ನಾ). ಮುಚ್ಚುವಿಕೆ; ಸಂಕೋಚಗೊಳಿಸುವಿಕೆ; ಮುದುರುವಿಕೆ : (*). [< ಕೋಚ₂]

**ಕೋಚಿ₁** 'ಕೋಸು₁' ನೋ.

**ಕೋಚ್ಚಿ** (ನಾ). ಕುಟಿಲಸ್ವಭಾವದವನು; ಕುಹಕಿ; ಕಪಟಿ (?): ಆ ಸಡರಾಡರಾತ್ಮಕನವದಿರೆಚ್ಚಂಬುಗಳನಂಬರದ ಅಚೆಯಲಿ ನೆಲಕು ದುರದಿಡದೆ ವಿಲೋಚನದ ಕಿಡಿಗಳಲಿ ಸುಟ್ಟಾ ಕೋಚಿಗಳ ಕುಡದಾಡಿ ಸುತಲಿರ್ದನು ಮುರಧ್ವಂಸಿ (ಪ್ರಹ್ಲಾ.ಚ. ೧೫–೨೬). [ಕೋಚು$_1$ (< ಕೋಸು$_2$) + -ಇ$_3$]

**ಕೋಚಿಮಾಡು**, ಕೋಚುಮಾಡು (ಕ್ರಿ). ತುಂಡು ಮಾಡು; ಕತ್ತರಿಸು: ಪವನಜಂ ಕೊರ್ಗಣೆಯ ಜಳ್ಳಿಲಿಸಿ ಜಡಿದು ಬಿಡಲಂ ಧನುವ ಸಾರಥಿಯು ತುರಗಮಂ ಹೊಂದೇರನು ಕೋಚಿಮಾಡಿದನೆರಡು ಸರಳೆನೊಳ್ (ತುರಂಗ. ೪೫–೫೫). **ಕೋಚುಮಾಡು**: ಕಟುವಾದ ಮಾತಿನಿಂದ ಅವನನ್ನು ಕೋಚುಮಾಡಿದರು (ರೂಢಿ). [ಕೋಚ್ಚಿ + ಮಾಡು$_1$]

**ಕೋಚು$_1$** 'ಕೋಸು$_2$' ನೋ.

**ಕೋಚು$_2$** (ನಾ). ಕದ; ಬಾಗಿಲಿನ ರೆಕ್ಕೆ: "ಕೋಚೆಂದು ಪೇಜಲ್ ಪಡಿಗಳ್ಕುಂ ಪೆಸರ್" (ಕವಿಕಂ. ೨೪೨). [?]

**ಕೋಚು$_3$**, ಕೋಚ್ (ನಾ). ನಾಲ್ಕು ಗಾಲಿಯ ಕುದುರೆಗಾಡಿ; ಸಾರೋಟು: ಕೋಚುಗಾಡಿಗಳು ಈಗ ಹೆಚ್ಚು ಉಪಯೋಗದಲ್ಲಿಲ್ಲ (ರೂಢಿ). **ಕೋಚ್**: ಕೋಚ್ ಒಂದಕ್ಕೆ ಬೆಳಗ್ಗೆ ಎರಡು ಕುದುರೆ, ಸಂಜೆಗೆ ಎರಡು (ಚಂಗೂಲಿ. ೭೫). [← ಇಂ. Coach]

**ಕೋಚು$_4$** (ನಾ). ೧. "ತುದಿ" (ಜಾನಕೋ. ೪೨). ೨. "ಏರುದನಿ" (ಜಾನಕೋ. ೪೨). 'ಕೋಚೆತ್ತು' ಪರಾ. [?]

**ಕೋಚುಬಂಡೆ** (ನಾ). ಓರೆಕೋರೆಯಾಗಿ ಚಾಚಿಕೊಂಡಿರುವ ಬಂಡೆ; ವಕ್ರಶಿಲೆ: ನದಿಯಲ್ಲಾಗಲಿ, ಸಮುದ್ರದಲ್ಲಾಗಲಿ ಹೂತು ಕೊಂಡು ಸಂಚಾರಕ್ಕೆ ಅಡಚಣೆಯುಂಟು ಮಾಡುವ ಮರದ ತುಂಡು, ಕೋಚುಬಂಡೆ ಮೊದಲಾದುವು (Snag. ಇಂಕಾ). [ಕೋಚು$_1$ (< ಕೋಸು$_2$) + ಬಂಡೆ]

**ಕೋಚುಭಟ್ಟ**, ಕೂಚಂಭಟ್ಟ, ಕೂಚಿಭಟ್ಟ, ಕೂಚುಭಟ್ಟ, ಕೂಸಂಭಟ್ಟ (ನಾ). ಬುದ್ಧಿಗೇಡಿ; ಅವಿವೇಕಿ; ಅರೆಮರುಳ: ಓದಿ ಓದಿ ಮರುಳಾದ ಕೋಚುಭಟ್ಟ (ಗಾದೆ). **ಕೂಚಂಭಟ್ಟ**: ಚಂದದ ಗಾಜಿನ ಮನೆಯಲ್ಲಿ ಕೂತು ಕೂಚಂಭಟ್ಟರಾಗಿದ್ದೇವೆ (ಹೊಸಕ್ಕಿ. ೬೫). **ಕೂಚಿಭಟ್ಟ**: ಓದಿ ಮರುಳಾದೆಯೋ ಕೂಚಿಭಟ್ಟರೆ (ಸಿದ್ಧೇವ. ೭೫–೨೧೮). **ಕೂಚುಭಟ್ಟ**: ಓದಿ ಓದಿ ಮರುಳಾದ ಕೂಚುಭಟ್ಟ (ರೂಢಿ). **ಕೂಸಂಭಟ್ಟ**: ಕೂಸಂಭಟ್ಟ (ಓದಿ ಓದಿ ಮರುಳಾದವನು) (ನಮ್ಮನು. ೧೦೮). [ಕೋಚು$_1$ (< ಕೋಸು$_2$) + ಭಟ್ಟ]

**ಕೋಚುಮಾಡು** 'ಕೋಚಿಮಾಡು' ನೋ.

**ಕೋಚೆ** 'ಕೋಸು$_1$' ನೋ.

**ಕೋಚೆತ್ತು** (ಕ್ರಿ). ಏರುದನಿಯಿಂದ ಕೂಗು; ಗಟ್ಟಿಯಾಗಿ ಮಾತನಾಡು: "ದನಿಯೆತ್ತು" (ಜಾನಕೋ. ೪೨). [ಕೋಚು$_4$ + ಎತ್ತು$_1$]

**ಕೋಜ** (ನಾ). (?): ಸಣ್ಣಮೈದಿಯು ಕಣಿಕ ಬೆಣ್ಣೆಸಕ್ಕರೆ ಕೋಜ ಬಣ್ಣಿಗೆವಡೆದ ಸೋವಿಯಿಂ ಕಲಸಿ ಕೈಗೈವುತಣ್ಣೆವಾಲ್ಗೆನೆವೊಡೆದ ಘಟರಿ ಘೃತ ಮಿಶ್ರದಿಂ ದಣ್ಣನೆ ದಣಿಯ ಪಣಿವಿಸಿ ತಣ್ಣಮೊಷ್ಟಂ ಸಮಾನಂಗೊಳಿಸಿ ತೆಗವುತಂ ಕಣ್ಣಂಜಲಾಗದಂತಿರಿಸಿ ಬಾಳೆಯ ಚಿಲ್ವ ಹಣ್ಣು ಹೆರದುಪ್ಪದಿಂ ಘೂರಿಕೆಯನರ್ಪಿಸಿದೆ ಮಿಣ್ಣಿಗೆ ಶಿವಾದ್ವಯಿತರು (ಲಿಂಗಪು. ೮–೧೨); ಸೂಜಿ ನಡೆತಂದವಯಸ್ಕಾಂತಮಂ ಪಿಡಿದಿಂದುತೇಜಮಂ ಶಶಿಕಾಂತ ಪಿಡಿದೊಜಹುಗಂಡತುಳ ವಾಜಿಯ ಧ್ವನಿಗೆ ವಾಹಳ ಪೆಚ್ಚು ಬಲಿದು ನವ ಕೋಜದಿಂ ಪ್ರಣಯವೆತ್ತು ಈ ಜಗದಿ ಮೆಜವಂತೆ ಭಕ್ತ ಕಾರಣವಾಗಿ ನೀ ಜೀವದಿ ಸುಳಿದು ಸುಲಭತ್ವ ಸಂಭವಿಸಿ ಮಹ ತೇಜ ವಿಖ್ಯಾತರಾದರ್ನಿಖಿಳ ಶರಣ ಭೂಜನ್ಮ ಶೇಷವಳಿದು (ಲಿಂಗಪು.೨೨–೧೮). [?]

**ಕೋಜದೇವ** (ನಾ). ಒಬ್ಬಾತನ ಹೆಸರು: ಮಲ್ಲಅಯ್ಯಂಗಳ ಮಕ್ಕಳು ಕೋಜದೇವ ಅಗಳು ಬಿಟ್ಟ ಧರ್ಮ್ಮ (ಮೈಆರ. ೧೯೪೬, ೧೦–೬; ?). [ಕೋಜ? + ದೇವ]

**ಕೋಜಯ್ಯ** (ನಾ). ಒಬ್ಬಾತನ ಹೆಸರು: ಸಾಯಲರ ಕೋಜಯ್ಯ ಕೊಬರರ ಅಳಿಯ ಸಿರಿ ಮೇಜಿ ಕುಜುವಾನ್ನಿ ಕ್ಕಿಸಿ ಕಾದಿ ಸತ್ತ (ಎಕ. X, ಶಿಡ್ಲ. ೫೯–೪; 900). [ಕೋಜ? + ಅಯ್ಯ$_1$]

**ಕೋಜು** (ನಾ). ಪತ್ತೆಹಚ್ಚುವುದು; ಶೋಧನೆ; ತಪಾಸಣೆ: ನೀನು ಊರಿಗೆ ಹಳವಾರನು, ಊರಿನಲ್ಲಾದ ಕಳ್ಳತನದ ಕೋಜನ್ನು ನೀನೆ ಮಾಡಬೇಕು (ಕಥಾಮಂ. IV, ೨೭). [← ಹಿಂ. ಮರಾ. ಖೋಜ್]

**ಕೋಜೋತಗವುಣ್ಡ** (ನಾ). ಒಬ್ಬಾತನ ಹೆಸರು: ಕೋಜೋತ ಗವುಣ್ಡರ ಮಗ ಎಜೆಯಮ್ಮ ವೆಳಜ ಗವುಣ್ಡರ ಪಟ್ಟದಳ ಕೊಣ್ಣಡರಿ ಮಾಡಿದಂ (ಎಕ. IX, ಹೊಸಕೋ. ೮೭–೨; 750). [ಕೋಜೋತ? + ಗವುಂಡ (< ಗಾಮುಂಡ)]

**ಕೋಟ್** 'ಕೋಟು$_4$' ನೋ.

**ಕೋಟೆ$_1$** 'ಕೊಟ್ಟು$_3$' ನೋ.

**ಕೋಟೆ$_2$** 'ಕೊಟ್ಟು$_2$' ನೋ.

**ಕೋಟೆ$_3$** (ನಾ). ೧. ವಕ್ರತೆ; ಕುಟಿಲತನ. ೨. ಗುಡಿಸಲು; ಜೋಪಡಿ. ೩. ಕೋಟೆ; ಖಿಲ್ಲೆ. [ಸಂ.]

**ಕೋಟೆ$_4$** (ನಾ). ೧. ಒಂದು ಊರಿನ ಹೆಸರು. ೨. (ಕರಾ) ಬ್ರಾಹ್ಮಣರಲ್ಲಿ ಒಂದು ಪಂಗಡದ ಹೆಸರು; ಆ ಗುಂಪಿಗೆ ಸೇರಿದ ವ್ಯಕ್ತಿ: ಕೋಟದು, ಸಕಳಾಪುರಿ, ಶಿವಳ್ಳಿ ಇವು ಹೈಗರೊಳಗಿನ ಒಳ ಭೇದಗಳು (ಕಥಾಗ. ೮೫). [?]

**ಕೋಟೆ$_5$**, ಕೋಟಾ$_1$ (ನಾ). ಒಟ್ಟು ಮೊತ್ತದಲ್ಲಿ ಒಬ್ಬ ವ್ಯಕ್ತಿ ಅಥವಾ ಸಂಘವು ಒದಗಿಸಲೇಬೇಕಾದ ಅಥವಾ ಪಡೆಯಲು ಹಕ್ಕುಳ್ಳ ಪಾಲು, —ಭಾಗ, —ಅಂಶ; ಪಸುಗೆ: ವಾರದ ಒಲುಮೆಯ ಕೋಟವು ನಾಳೆಯ ಎಂದ ನಲ್ಲೆಯ ನಲ್ಲ ನೋಡಿ (ಚಂಪ್ರವೀ. ೧೫–೭). **ಕೋಟಾ$_1$**: ಈ ವಾರದ ಕೋಟಾ (ರೂಢಿ). [← ಇಂ. Quota]

**ಕೋಟಗಾಮುಂಡ** (ನಾ). ಒಬ್ಬಾತನ ಹೆಸರು: ಕೋಟಗಾಮುಣ್ಡನುಂ [ಮಾದಿ]ಗಾಮುಣ್ಡನ ಸಹಿತ ದಿರ್ಬಲ್ಲುಮಾದರ[ನುಂ] (ಸೌಇಇ. XI-i, ೭–೨೧; 837). [ಕೋಟ? + ಗಾಮುಂಡ]

**ಕೋಟಗಾಜ** (ನಾ). ಕೋಟೆಯ ರಕ್ಷಣೆಯಲ್ಲಿರುವವನು; ದುರ್ಗಪಾಲಕ: ಬಲವೊಡ್ಡುಯಡವಂಕದೊಳು ಸಲೆ ಮೆಚಿದು ಕಡುಗಲಿ ಕೋಟ [ಪಾಕಾಂ. ಟಿ] ಗಾಜರ ಬಲು ಫೌಜು ಬಣ್ಣಿಪನೇನ (ಕುರಾಸಾಂ. ೧೨–೩೪). [ಕೋಟೆ$_3$ + -ಕಾಜ]

**ಕೋಟರ** (ನಾ). ೧. ಮರದ ಪೊಟರೆ; ಡೊಗರು; ಟೊಳ್ಳು: "ನಿಷ್ಕುಟಃ, ಕೋಟರಃ–ಈ ೨ ಮರದ ಪೋಟರ್" (ಹಲಾಯು. ೩೭–೨೮); ಒಂದು ಮಹಾವಟವಿಟಪಿಕೋಟರಮ ಕುಲಾಯಮಾಗಿ ಕಾಕ ಮಿಥುನ ಮಿರ್ಕುಂ (ಪಂಚತಂ. ೫೨–೩); ಅದ್ರಿಕುಜಂಗಳ ಕೋಟರಂಗಳೊಳ್ ಪೋದಗೆ ತತ್ತಿಯಿಕ್ಕಿದುದು (ಜಗವಿ. ೪–೭); ಕೋಟರದೊಳ್ ಪುಗುವ ವಿಹಗಂಗಳಂ (ಗಂಗಿ. ೪–೭೦). ೨. ಒಳಗಿನ ಭಾಗ; ಬಿಲ; ರಂಧ್ರ: ದುರ್ಜನ ಪ್ರಕರದ ಕರ್ಣಕೋಟರಮನೇಕೆಯೊ ಮಾಡಿದನಬ್ಜವಿಷ್ಟರಂ (ಪಂಪಾರಾ. ೧–೧೧); ಅಭಿಮಿಷಯ್ಯನ ಜೀವಕಳೆ ಬಂದು ನಾಟಿತೀಶನ ದಿವ್ಯದೇಹದ ಕೋಟರದೊಳೇನೆಂದೆನ್ನೆ (ಪ್ರಭುಲೀ. ೧೧–೨೮); ಕರ್ಣದ ಕೋಟರಂಗಳು ಕಿವುಡುಗೊಳೆ (ತೊರರಾ. ೬–೨೭–೪). [ಸಂ.]

**ಕೋಟರಪುಷ್ಪಿ** (ನಾ). ಒಂದು ಬಗೆಯ ಗಿಡ; ಎಮ್ಮೆಬಳ್ಳಿ: "ವ್ಯಾಳಿ ಕೋಟ[ಪಾಠಾಂ. ರ]ರಪುಷ್ಪಿಯೆನಲೆಮ್ಮೆವಳ್ಳಿ" (ಮಂಗರಾ. ೪೪-೪೬). [ಕೋಟರ + ಪುಷ್ಪಿ]

**ಕೋಟರಿ** (ನಾ). = ಕೋಟವಿ: (*). [ಸಂ. ಕೋಟರೀ]

**ಕೋಟಲಿಗ** (ನಾ). ಕೋಟಲೆ ಕೊಡುವವನು; ಹಿಂಸೆ ಮಾಡುವವನು; ಪೀಡೆ ಕೊಡುವವನು: (*). [ಕೋಟಲೆ + -ಇಗ]

**ಕೋಟಲೆ** (ನಾ). ತೊಂದರೆ; ಕಷ್ಟ; ಕಾಟ: "ಕೋಟಲೆಯೆನೆ ಸೂಟು" (ಧಾರೆನಿ. ೨೪೯); ಅನುಭವಿಸಿದ ಕೋಟಲೆಗಳನಿನಿಸಂದೆಣಿಸಲ್ಕೆ ಮೌಕ್ತಿಕಾ ಕ್ಷಾವಳಿಯಂ ವನಜದಳನಯನೆ ಸವೆದಪಳೆನೆ ಸುರಿದುವು ಕರಡೆ ಕೋರ ಕಣ್ಬನಿದುಱುಗಲ್ (ಅಹಂಲು. ೨೯೩); ಸಲೆ ತಲೆಗೆಟ್ಟೋಡುವ ಕೋಟಲೆ ಗಾಜಿಕೆ ತದ್ದಿರೆಂತ್ರೆಮಂ ಸಾರ್ದು (ಹರ್ಧಶ. ೧೦-೧೬); ಬೇಟದ ಕೋಟಲೆಯೊಳವನ ಮುಳ್ದಾಯ್ತು (ದಶಕು. ೧೨-೭೮); ತಾಟುತ್ತ ಮೈಯು ಬಡಿವಾಗ ಮುದಿಯನ ಕೋಟಲೆಯ ನೋಡ (ಸರ್ವಜ್ಞ. ೧೮೧೧); ಅಟ್ಟುಂಡೋದು ಆರು ಕೋಟಲೆ ತಿರಿದುಂಬೋದು ಪರಮ ಸುಖ (ಗಾದೆ).

[ದೇ. || ತಮಿ. ಕೋಟ್ಪಾಲ್ಯ; ಮಲ. ಕೋಟ; ತುಳು. ಕೋಟಲೆ; ತೆಲು. ಕೋದಾಡು]

**ಕೋಟಲೆಗುಡು** (ಕ್ರಿ). ಕೋಟಲೆ ಕೊಡು; ತೊಂದರೆಯನ್ನುಂಟು ಮಾಡು; ಕಷ್ಟಕೊಡು; ನೋಯಿಸು: ನಿರಂತರವಾಗಿ ಕೋಟಲೆ ಗುಡುವ ನಮ್ಮ ಒಂದು ಅಂಗದಲ್ಲಿ (ಸುಗುಣಿ. ೬೪).

[ಕೋಟಲೆ + ಕುಡು$_1$ (< ಕೊಡು$_1$)]

**ಕೋಟಲೆಗೊಳ್** (ಕ್ರಿ). ತೊಂದರೆಪಡು; ಶ್ರಮಪಡು; ಕಷ್ಟಪಡು; ನೋವನ್ನನುಭವಿಸು: ಬಡಿವ ಕಾಲ್ ಧೂಭಾಗದೊಳ್ ತಂದು ಕಾಟಪುಟಂ ಕೋಟಲೆಗೊಳ್ವ ರತ್ನಮಕುಟದ್ಯೋತೋತ್ತಮಾಂಗಂ (ಶಾಂತಭಾ. ೧೨-೧೫೧); ಆ ತಪೋವನದೊಳ್ಕೋಟಲೆಗೊಂಡು ದಾಱದೆ ಕೆಪಂಗೆಯ್ವುತ್ತಿರಲ್ (ಕಾದಂಪೂ. ೯೪೪); ಸಂತಸಂ ಕುದಿದು ಕೋಟಲೆ ಗೊಂಡನಿನ್ನೆಗಂ (ವಾಗೀಶ. ೨೬೧); ಕಣಿಗುದಿಗುದಿದು ಕೋಟಲೆಗೊಂಡು ದಣಿಸೇನೆ (ಉಪ್ಪಾದ್ಯೋ. ೧೯-೩೬); ಊಟ ನಿದ್ದೆಗಳೊಂದರೊಳು ಸುಖ ಮಿಲ್ಲದೆ ಕೋಟಲೆಗೊಂಡು ಕುಗ್ಗುವರು (ಹದಿಬ. ೬-೭); ಕೋಟ ಮಾಡಿದವನು ಕೋಟಲೆಗೊಳ್ಳ (ಗಾದೆ). [ಕೋಟಲೆ + ಕೊಳ್$_1$]

**ಕೋಟಲೆಗೊಳಿಸು** (ಕ್ರಿ). ಕೋಟಲೆಗೆ ಗುರಿಮಾಡು; ಹಿಂಸೆಪಡಿಸು; ಕಾಡು; ನೋಯಿಸು: ಅಮರತ್ವಮಂ ಪಡೆದಮರಸಮಿತಿಯಂ ಕೋಟಲೆಗೊಳಿಪ ಹಿರಣ್ಯಾಕ್ಷನಂ (ಪಂಚತಂ. ೨೪೮-೧೦); ಕೋಟಲೆ ಗೊಳಿಪರು ವಿಟವಿದೂಷಕರ ಕಷ್ಟೇಟದಿ ಮರುಳುಮಾಡುವರು (ಮೋಹತ. ೧೮-೪೮); ಬಲು ಮೃಗವು ಮರಪಕ್ಷಿ ಕೀಟಕ ಜಲಚರೌಘದಿ ಜನಿಸಿದೆನು ಕೋಟಲೆಗೊಳಿಸದೇಡಕಟ ಮಾನವನಾದ ಬಳಿಕಿನ್ನು (ಹರಿಕಾ ೫೭).

[ಕೋಟಲೆಗೊಳ್ + -ಇಸು$_3$]

**ಕೋಟಲೆಪಡು** 'ಕೋಟಲೆವಡು' ನೋ.

**ಕೋಟಲೆಬಡಿಸು** 'ಕೋಟಲೆವಡಿಸು' ನೋ.

**ಕೋಟಲೆಬಡು** 'ಕೋಟಲೆವಡು' ನೋ.

**ಕೋಟಲೆವಡಿಸು**, ಕೋಟಲೆಬಡಿಸು (ಕ್ರಿ). ತೊಂದರೆಗೆ ಗುರಿ ಮಾಡು; ಕಾಟಕೊಡು; ನೋಯಿಸು: ಪಿರಿದುಂ ಕೋಟಲೆವಡಿ[ಪಾಠಾಂ. ಗೊಳಿ]ಸುವ ದುರಿತಾರಾತಿಗಳನಾವಗಂ ಗೆಲ್ದುದಱಿಂದರಹಂತ ನೆಂಬ ನಾಮಂ ಪರಮಜಿನಂಗೆ (ಸಮಪ. ೪-೨೦೦). **ಕೋಟಲೆಬಡಿಸು**: ಕಷ್ಟ ಪಾಪ ಕೈಗಡಿಸಿ ಕೋಟಲೆಬಡಿಸುವುದು (ಕರ್ಣವೃ. ೧೦-೩೧).

[ಕೋಟಲೆವಡು + -ಇಸು$_3$]

**ಕೋಟಲೆವಡು**, ಕೋಟಲೆಪಡು, ಕೋಟಲೆಬಡು (ಕ್ರಿ). ಕಷ್ಟಪಡು; ತೊಂದರೆಗೊಳಗಾಗು; ಹಿಂಸೆಗೆ ಗುರಿಯಾಗು; ನೋವನ್ನನುಭವಿಸು: ಕೋಟಲೆವಟ್ಟೀ ನಿಷ್ಫಲರೋದೊಳ್ಯೋಗವನೊಡರಿಪುದೇನ್ (ಪಂಶಾಮಾ. ೧೬-೫೫). **ಕೋಟಲೆಪಡು**: ನಿನ್ನನ್ನು ದೊಡ್ಡವನನ್ನಾಗಿ ಮಾಡಲು ನಾನೆಷ್ಟು ಕೋಟಲೆಪಟ್ಟೆ (ರೂಢಿ). **ಕೋಟಲೆಬಡು**. 'ಕೋಟಲೆಬಡಿಸು' ಪರಾ. [ಕೋಟಲೆ + ಪಡು$_1$]

**ಕೋಟವಿ** (ನಾ). ೧. ಬತ್ತಲೆ ಹೆಂಗಸು: "ನಗ್ನಾ, ಕೋಟವೀ - ಈ ೨ ನಗ್ನೆ" (ಹಲಾಯು. ೬೯-೩೨೯). ೨. ದುರ್ಗಾದೇವಿ. 'ಕೋಟವಿಪುರ' ಪರಾ. [ಸಂ. ಕೋಟವೀ]

**ಕೋಟವಿಪುರ** (ನಾ). (ಅವೃತ ಸಮುದ್ರದ ಮಧ್ಯದಲ್ಲಿರುವ ಮಣಿದ್ವೀಪದಲ್ಲಿ ನೆಲಸಿರುವುದಾಗಿ ಪುರಾಣಗಳಲ್ಲಿ ವರ್ಣಿತವಾದ) ದುರ್ಗಾದೇವಿಯ ಪಟ್ಟಣ: ಸುರಪುರಕೆ ಹರಪುರಕೆ ಹರಿಯಜ ಪುರಕೆ ಅಳಕಾಪುರಕೆ ಕೋಟವಿಪುರಕೆ . . . ಬೊಮ್ಮನಪುರಕೆ ಸೂರ್ಯಾದಿ ಮಿಗಿಲೆನಿಸಿ ತಾ ಕರ ಚೆಲುವಿನಿಂದೆಸೆವುದದು ಪಾತಾಳದೊಳು ಲಂಕೆ (ಶೌರಿಂ. ೩೯-೨). [ಕೋಟವಿ + ಪುರ]

**ಕೋಟವೊಕ್ಕಲಿಗ** (ನಾ). ಒಕ್ಕಲಿಗರಲ್ಲಿ ಒಂದು ಪಂಗಡ. P ಅಡಕೆ ಮರಗಳ ಗೊನೆಗಳಿಗೆ ಕೊಟ್ಟೆ ಕಟ್ಟುವ ಕಸುಬಿನ ಒಕ್ಕಲಿಗ: ಕೋಟವೊಕ್ಕಲಿಗರು - ಇವರು ಶಿರಸಿ, ಸಿದ್ಧಾಪುರ ತಾಲ್ಲೂಕುಗಳಲ್ಲಿ ಇರುತ್ತಾರೆ. ಅಡಿಕೆಗೊಂಚಲುಗಳಿಗೆ ಚೀಲುಮಾಡಿ ಹಾಕುವ ಹೋರೆಯನ್ನು ಮಾಡುತ್ತಿರುವ ಕಾರಣ ಇವರಿಗೆ ಈ ಹೆಸರು ಬಂದಿದೆ (ಕಭಾಗ. ೧೪೪). [ಕೋಟ$_2$ (< ಕೊಟ್ಟೆ$_2$) + ಒಕ್ಕಲಿಗ]

**ಕೋಟಾ$_1$** 'ಕೋಟ$_5$' ನೋ.

**ಕೋಟಾ$_2$** (ನಾ). ಕರುಳು: (*).

[← ಪ್ರಾ. ಕೋಟ್ಠ < ಸಂ. ಕೋಷ್ಠ]

**ಕೋಟಾಚಕ್ರ** (ನಾ). ಕೋಟೆಯ ಮಂಡಲ, —ಸುತ್ತು: ಜಳಧಿ ಜಂಬೂದ್ವೀಪಮಂ ಸುತ್ತಿ ಸೌಂದರಮಾಗಿರ್ಪವೊಲಿರ್ಪುದಪ್ರತಿಮ ಕೋಟಾಚಕ್ರಮಂ ಸುತ್ತಿ . . . ನಿರಂತರ ಕಾಂತಂ ಪರಿಖಾಂತರಂ (ಪುಷ್ಪದ. ೨-೩೨); ಆ ಪೊಜವೊಳಲ ಅಂತರಾಳದೊಳೆಪ್ಪುದೊಂದು ಕೋಟಾಚಕ್ರವಂತರಿಕ್ಷವ ಚುಂಬಿಸುತ (ಕುರಾಸಾಂ. ೪-೮೫); ಮೆಱೆವ ಕೋಟಾಚಕ್ರಭವಕಾಂತಿ ಮುಂಬರಿದು ತರಣಿ ಶಶಿ ಸಪ್ತಾರ್ಚಿತೇಜಂಗಳಂ ದಿವದಲಿರಿಸಿರ್ಪ ದೀಪಗಳ ದೆಸೆಯುನೀವುತಲಿರ್ದುದು (ತೆಂಕಾರಾ. ೧-೪-೯).

[< ಸಂ. ಕೋಟಚಕ್ರ]

**ಕೋಟಾಯಂತ್ರ** (ನಾ). ಕೋಟೆಯನ್ನು ಭೇದಿಸುವ ಯಂತ್ರ, —ಉಪಕರಣ. ನೊಣೆಯಲ್ ನುಂಗಲಿಳಾತಳಂ ಮುರಿದು ಮರೂರಿಟ್ಟಂತೆ ದುರ್ಗಕ್ಕೆ ನಿಚ್ಚಣಿ ಸಾಚುರ್ದೊಲೆ . . . ಪಡಿಗೋಂಟೆಯೆಂಬ ಬಹು ಕೋಟಾಯಂತ್ರಸಾಮಗ್ರಿ ತಿಂತಿಣಿಗೊಂಡಾಂತಿರೆ (ಅನಂಪು. ೧೧-೮೬).

[< ಸಂ. ಕೋಟಯಂತ್ರ]

**ಕೋಟಾರ** 'ಕೊಟ್ಟಾರ$_1$' ನೋ.

**ಕೋಟಾವಲಯ**, ಕೋಟಾವಳಯ (ನಾ). = ಕೋಟಾಚಕ್ರ: ಬರಬರುತೆ ದರ್ಶನಕಗುರ್ವಿದುದು ಪರ್ವತಂಬೋಲ್ ಬಂದೆ ಬಂದೆಯ ಮಸೆದು ಬೆಸೆದು ಕೋಟಾವಲಯಭಿತ್ತಿ (ಶ್ರೀರಾಮಾ. ೪೩೩-೯೯೪). **ಕೋಟಾವಳಯ**: ನಿಲುವೆವಿಲ್ಲಿ ವಿರೋಧಿ ಸಂತತಿಯುಬ್ಬಹನಾಲಿಸ ಬಹುದು ಕೋಟಾವಳಯವಿದೆ ಹತ್ತಿರೆಯೆನುತ ಗುರುಸೂನು ರಥವಿಳಿಯೆ (ಉದ್ಯೋಗ. ೯-೨); ಪೊಳಲದಮರಾವತಿಗೆ ಪೊಗೆ[ಪಾಠಾಂ. ತೊಲೆ, ಮಿಗೆ] ವೆಗ್ಗಳವೆನಲು ರಂಜಿಸಿತು ಕೋಟಾವಳಯ ಕೊತ್ತಳದಾಳುವೇರಿಯ ವಿವಿಧ ರಚನೆಯಲಿ (ತೊರರಾ. ೬-೧೦-೧೬). [< ಸಂ. ಕೋಟವಲಯ]

**ಕೋಟಾವಳಯ** 'ಕೋಟಾವಲಯ' ನೋ.

**ಕೋಟಾವಳಿ** (ನಾ). ಕೋಟೆಗಳ ಸಾಲು, —ಪಂಕ್ತಿ: ಧಗಧಗಿಪ ಕೋಟಾವಳಿಯು ಹೊಗರೊಗಗುವ ಹೇಮದ ಕೊತ್ತಳಂಗಳ (ನಳಚ. ೩-೨೫). [ಕೋಟೆ₃ + ಆವಳಿ₁ (= ಆವಲಿ)]

**ಕೋಟಿ₁** (ನಾ). ೧. ಕೊನೆ; ತುದಿ; ಅಗ್ರ; ಕೋಡು: ಅತ್ಯಂತ ಕೋಮಲ ವಿಪುಲ ತುಲಾಕೋಟಿಯಿಂ ತೂಗೆ ತನ್ನರ (ಪಂರಾಮಾ. ೧-೩೨); ಶ್ರೀಕಾಂತಮದ್ವಿಧರ್ ಸ್ವಭ್ರೂಕೋಟಿಯ ಪರ್ದಿನಿಂದವಪ್ಪರ್ ಕಿಡುವರ್ (ಜಗವಿ. ೪-೧೦೪). ೨. ತರಗತಿ; ವಿಭಾಗ; ವರ್ಗ: ಇವನು ಮನುಷ್ಯ ಕೋಟಿಗೆ ಸೇರಿದವನೇನಲ್ಲ (ರೂಢಿ). ೩. ಆಕ್ಷೇಪಣೆ; ಮೊದಲಿಕೆ: ಭೋಜನ ಮಾಡುತ್ತಿರುವಾಗ ಎರಡೂ ಪಕ್ಷದ ಸ್ತ್ರೀಯರು ಪರಸ್ಪರ ಕೊಳೆ ಕೋಟಿಗಳನ್ನು ಮಾಡಿ ಭೂಮದ ಹಾಡು ಹಾಡಹತ್ತಿದರು (ಕುಳು. ೩೨). ೪. ಅಸಂಖ್ಯವಾದದ್ದು; ಲೆಕ್ಕವಿಲ್ಲದ್ದು; ಅಪರಿಮಿತವಾದದ್ದು: ಉಪಾತ್ತನಾರಾಯಣನಾದ ದೇವನನಿಮಗೀಗಲೀಶರ ಸೌಖ್ಯಕೋಟಿಯಂ (ಪಂಪಭಾ. ೧-೧); ಹಾಲುತುಪ್ಪದ ಕೋಟಿ ಕೊಪ್ಪರಿಗೆಯಂಕಲ್ಲಿ ಸಮೆದು ಶಿವಲಿಂಗಕ್ಕೆ ಕಂಪಿಡುತ್ತಿಹೆ ಕಂಡು (ಬಸರ. ೬-೧೬); ಇಡಿದೊಳಬುಜ ಭವಾಂಡ ಕೋಟಿಯನಡಗಿಸಿಪ್ಪ ಮಹಾಮಹಿಮಗಾವುತ್ತಿಡಳ ತೊಟ್ಟಿಲೊಳ ಮವು ನಿಗಮಾಳಿಗಳು ಬೆಜಗಾಗೆ (ಕೂರರಾ ೧-೮-೬೩); ಎಲ್ಲಮ್ಮನ ಭಕ್ತ ಕೋಟಿಯೆ ಇದಕ್ಕೆ ಸಾಕ್ಷಿ ಕರ್ನಾಟ. ೩೬); ಕೋಟಿಭಾಗ್ಯವಿದ್ದವ ನಾದರೂ ಕಡೆಗೆ ಕಾಡಿನಲ್ಲೇ ಇರಿಸುತ್ತಾರೆ (ಗಾದೆ). ೫. ಮೂಲೆ; ಕೋಣ: "ಅಣಿ, ಅಶ್ರಿ, ಕೋಟಿ, ಅಶ್ರ, ಕೋಣ - ಕೊನ ಗೋಟು" (ಹಲಾಯು. ೧೨೦-೯೨). ೬. ಕಣ್ಣಿನ ತುದಿ, —ಕೊನೆ: (ಕಿ). ೭. ಕತ್ತಿಯ ಅಲಗು, —ಬಾಯಿ. ೮. ಬಿಲ್ಲಿನ ತುದಿ; ಕೊಪ್ಪು. ೯. ಪ್ರಾಧಾನ್ಯ; ಶ್ರೇಷ್ಠತೆ. ೧೦. ಏಡವೆ; ಅಲಂಕಾರ. ೧೧. ಮನಸ್ಸಿನ ಉಲ್ಲಾಸ; ಸಂತೋಷ. ೧೨. ಮರದ ಪೊಟರೆ; ಬಿಲ. ೧೩. ಕೈಯ ಬಳೆ, —ಕಡಗ. ೧೪. ಸಮರ; ಯುದ್ಧ. ೧೫. ಒಂದು ಸಂಖ್ಯೆ; ನೂರುಲಕ್ಷ: ವೈದಿಕರಪ್ಪ ವೇದವಿತ್ತುಗಳೊಂದು ಕೋಟಿಗೆ ಅನ್ನವನಿಕ್ಕಿದ ಫಲಕ್ಕೆ ಕೋಟಿ ವಿಗುಣಿ ಶಿವಶರಣಂಗೆ ಒಂದು ಭಿಕ್ಷವನಿಕ್ಕಿದ ಫಲ (ಆದಪ. ೩೨); ಹತ್ತು ಮೂಱೇ ಕೋಟಿಯಮು ಕೈವಶೀಕಸಿತು ದಳಪತಿಗೆ (ಕುವ್ಯಾಕ. ೨-೩); ಕೋಟಿವರಹಾ ಕೊಟ್ಟರೂ ಕೋಮಟಿಯ ಸಾಕ್ಷಿ ನಂಬಕೂಡದು (ಗಾದೆ). ೧೬. [ರೇಖಾಗ] ಸಮಕೋನ ತ್ರಿಕೋಣದ ಲಂಬಭುಜ: "ಉತ್ಕರುಷದೊಳು ಧನುಧಿನೊಳು ಸಂಖ್ಯೆಯೊಳು ಕೋಟಿಯಕ್ಕು" (ಮಂಗರಾ. ೧೫೨-೧೫೩); "ಅಗಣಿತಭೂಷಣಂ ಸುರಗಿ ಸೌಂದರ ಕೋಟಿರ ಚಾಪದಂತ್ಯ ಸಂಯು ಗಮನದುತ್ಸವಂ ಗಣನೆಯೊಂದಿವು ಕೋಟಿ ಸಮಾಹ್ವಯಂ (ನಾನಾರ.೪೪); "ಗುಹೆ ಬಿಲ್ಲಕೊಪ್ಪು ಲಿಪ್ಸೋತ್ಸಹ ರೂಪು ಕಠಾರಿ ಕರಭೂಷಣ ಸಮರಂಗಳ್ ಸಹಜದೊಳೆಂಟು ಪೆಸರ್ ಬಳೆಕಹುದೈ ಕೇಳ್ ಕೋಟಿಶಬ್ದ ಮೆನಿಕುಂ ಜಗದೊಳ್" (ನಾನಾಕೊ. ೮೬).

**ಕೋಟಾಕೋಟಿ** = ಕೋಟಿಗಟ್ಟಲೆ; ಅಸಂಖ್ಯ: ಪುನರ್ಭವಂಗಳೆಂಬ ಕೋಟಾಕೋಟಿಗಳ್ ಪಾಱಿ ದೀಱ್ವನೆಗಂ ಪಂದಲೆಗಳ್ (ಪಂರಾಮಾ. ೧೪-೧೬೬); ಮೆಱೆವವು ಗುಡಿ ಕೋಟಾ ಕೋಟಿ ಭೂತಳ ನೆಱೆಯದು ಬೀಡಿಗೆಂದೆನಲು (ಕುರಾಸಾಂ. ೧೯-೫೩). **ಕೋಟಾನುಕೋಟಿ, ಕೋಟ್ಯಾನುಕೋಟಿ** = ಕೋಟ್ಯಂತರ; ಅಸಂಖ್ಯ: ಹಲಿಯಮೇಂದ್ರಾದಿ ಗಳು ಕೋಟಾನುಕೋಟಿಗಳು ಮರಣವಪ್ಪರು (ವೀಕ್ಷಿಥ. ೨-೫-೧೪); ಕೋಟ್ಯಾನುಕೋಟಿ ವಿಷ್ಣು ಬ್ರಹ್ಮೇಂದ್ರಾದಿಗಳು ಕಾಲವು ತುಂಬಿದ ಬಳಿಕ ಮರಣವಾಗುವರು; ನಿನ್ನೀದ ಕೋಟಿ ಚಕ್ರವರ್ತಿಗಳಾದರೂ ಸಾಯುವರು (ವೀಕ್ಷಿಥ. ೨-೫-೧೪ ಟೀಕೆ) [ಸಂ.]

**ಕೋಟಿ₂, ಕೋಠಿ₁** (ನಾ). ವಸ್ತುಗಳನ್ನು ಕೂಡಿಡುವ ಸ್ಥಳ; ಉಗ್ರಾಣ; ಧಾನ್ಯಾಗಾರ. 'ಕೋಟಿಖೋಲಿ' ಪರಾ. ೨. ಹಾಯಿ ಹಡಗು; ನಾವೆ: ಜಲಮಾರ್ಗದಿಂದ ಮಚವೆದೊಳಗಿಂದ ಅಥವಾ ಕೋಟಿಯದೊಳಗಿಂದ ಕಳುಹಿಸಲಿಕ್ಕೆ ಬರದರೆ ಅದಕ್ಕೆ ಬೀಳುವ ಅಡತಿ (ಮುಂಬವ್ಯಾ. ೨೬). **ಕೋಠಿ₁**: ೧. ದಾರೀಲಿ ಕೋಠಿಯಿಂದ ಪರಿಮಳ ಗಂಧದ ತಂದು ಗೊಂಡು ಅಲ್ಲಿಗೇ ಬಂದು ಬಿಡು (ಮಾಂಗಲ್ಯ. ೧೫); ಮಿಕ್ಕ ಎಲ್ಲಾ ಸಾಮಾನುಗಳನ್ನೂ ಸಂಗ್ರಹಿಸಿಟ್ಟ ಅವನ ಕೋಠಿ (ತಕ್ಕಡಿ. ೧೪); ನಮ್ಮ ವ್ಯಾಪಾರಕ್ಕೆ ಅಡ್ಡಿ ಬರುತ್ತಿದ್ದುದನ್ನು ಕಂಡ ಅರಬ್ಬರು ಪೋರ್ಚುಗೀಸರು ತಂಗಿದ್ದ ಮನೆ ಮತ್ತು ಕೋಠಿಯ ಮೇಲೆ ಧಾಳಿ ಮಾಡಿದರು (ಪ್ರವಾಇ. II, ೨೨೫); ಕೋಠೀ ವ್ಯವಸ್ಥಾ ನಿನ್ನ ಕಡಿಗೆ; ನೀ ಬೇಕಾದ್ದು ಮಾಡಿಸಿಬಿಡು ಹೋಗಲಿ (ತಿದುಗು. ೫೫). [← ಹಿಂ. ಮರಾ. ಕೋಠೀ. / ಪ್ರಾ. ಕೋಟ್ಟ, ಕೋಟ್ಟಯ; < ಸಂ. ಕೋಷ್ಠ]

**ಕೋಟಿಕ** (ಗು). ೧. ತುತ್ತತುದಿಯ. 'ಕೋಟಿಕಶಿಲೆ' ಪರಾ. (ನಾ). ೨. ತುತ್ತ ತುದಿ; ಶಿಖರ. [ಸಂ.]

**ಕೋಟಿಕಶಿಲೆ** (ನಾ). [ಜೈನ] ಸಿದ್ಧ ಶಿಲೆ: ತಮ್ಮನುಂ ತಾನುಂ ಅನೇಕ ಕುಲರಾಜ ಸಮೂಹಂಬೆರಸು ಆಡುವ ನೆವದೊಳ್ ಪೋಗಿ ಕೋಟಿಕ ಶಿಲೆಯಂಕೋೞ (ಶಾಂತಿಪು. ೫-೨೫ ವ); ಕೋಟಿಕಶಿಲೆಯನೆತ್ತಿದ ಮಹಾ ಸತ್ತ್ವರ (ಪಂರಾಮಾ. ೧೪-೧೮೮ ವ); ಬರುತ ಬಟ್ಟೆಯೊಳಿರ್ದ ಕೋಟಿಕ ಶಿಲೆಗಂಡು ನೆರೆದಪಸುಗಳೆಂದರು (ವರ್ಧಪು. ೪-೪೮). [ಕೋಟಿಕ + ಶಿಲೆ]

**ಕೋಟಿಖೋಲಿ, ಕೋಠೀಖೋಲಿ** (ನಾ). (ಉಕ) ವಸ್ತುಗಳನ್ನು ಕೂಡಿಟ್ಟ ಕೋಣೆ; ಉಗ್ರಾಣ: ಕೋಟಿಖೋಲಿಯಲ್ಲಿ ಅಕ್ಕನೊಂದಿಗೆ ಚಹಾ ಅವಲಕ್ಕಿ ಕೊಡೆ (ವ್ಯಾ. ೯). **ಕೋಠೀಖೋಲಿ**: ದಡಕು ಬಂದು ಎಲ್ಲಾ ಜಾಗಾ ಹಿಗಿಟ ನೀವು ಕೋಠೀಖೋಲ್ಯಾಗ ಬಂದು ಮಲ ಕೊಂಡ್ರಿ (ಸಮಜೀ. ೨೮೨). [← ಹಿಂ. ಮರಾ. ಕೋಠೀಖೋಲೀ]

**ಕೋಟಿಗಾವುಂಡ** (ನಾ). ಒಬ್ಬಾತನ ಹೆಸರು: ಆವರನ್ವಯತಿಳಕಂ ಲೋಕವಿಶ್ರುತಂ ಪಿರಿಯ [ಕೋ]ಟಿಗಾವುಣ್ಡಂ ಸಂಭಾವಿಸಿದಂ (ಸೌಇಇ. XI-i, ೯೫-೯; 980). [ಕೋಟಿ₁+ ಗಾವುಂಡ (< ಗಾವುಂಡ)]

**ಕೋಟಿನಾಳು** (ನಾ). (ಕರಾ) ಹುಟ್ಟಿದ ದಿನದ ವಿವರ ಮತ್ತು ಗ್ರಹಕುಂಡಲಿಯನ್ನು ಒಳಗೊಂಡ ಜಾತಕ; ಜನ್ಮಕುಂಡಲಿ: ಜೋಯಿಸರಿಗೆ ಸಂತಾನವಾಗದಿರಲೇನು ಕಾರಣವೆಂದರಿಯಲು ಕೋಟಿ ನಾಳು (ಜಾತಕ) ತೋರಿಸಿದರು (ಭ್ರಾಂತಿಸು. ೪). [?]

**ಕೋಟಿಪತ್ರ** (ನಾ). ೧. ದೋಣಿಯನ್ನು ನಡಸುವ ಹುಟ್ಟು: "ಅರಿತ್ರಂ, ಕೋಟಿಪ[ಪಾಠಾಂ. ಪಾ]ತ್ರಂ - ಈ ೨ ನಾವೆಯ ಸೋಗೆ" (ಹಲಾಯು. ೧೧೧-೫೦). ೨. ಹಡಗಿನ ಮುಂಭಾಗ; ಚೂಣಿ: "ಹಡಗಿನ ಮುಖಂ ಕೋಟಿಪತ್ರನೆನಿಸಿಕ್ಕುಂ" (ಮಂಗರಾ. ೧೨೧-೫). [ಕೋಟಿ₁ + ಪತ್ರ]

**ಕೋಟಿಪಾತ್ರ** (ನಾ). = ಕೋಟಿಪತ್ರ ೧: "ಅರಿತ್ರಂ, ಕೋಟಿಪಾ[ಪಾಠಾಂ. ಪ]ತ್ರಂ-ಈ ೨ ನಾವೆಯ ಸೋಗೆ" (ಹಲಾಯು. ೧೧೧-೫೦). [ಕೋಟಿ₁ + ಪಾತ್ರ]

**ಕೋಟಿಯೇರಿಸು** (ಕ್ರಿ). ಆಕ್ಷೇಪಿಸು; ಮೊದಲಿಸು; ಪ್ರತಿವಾದಗಳನ್ನು ಒಡ್ಡು; ತರ್ಕಮಾಡು: ರಂಗನಾಥನು ಮರಾಠೀ ಕವಿಯ ಹಾಡನ್ನು ಹಿಡಿದು "ಅಲಿತವಹ ಕನ್ನಡದ ನುಡಿಯಲಿ ತಿಳಿದು ತನ್ನೊಳು ತನ್ನ ಮೋಕ್ಷವ ಗಳಿಸಿಕೊಂಡರೆ ಸಾಲದೆ? ಸಂಸ್ಕೃತದಲಿನ್ನೇನು?" ಎಂದು ಕೋಟಿಯೇರಿಸಿದನು (ಕವಿಚಾಂ. ೯೯). 'ಕೋಠಿ₁' ಪರಾ. [ಕೋಟಿ₁ + ಏರಿಸು(< ಏಱಿಸು)]

**ಕೋಟವರ್ಷೆ** (ನಾ). ಒಂದು ಔಷಧಿಯ ಹೆಸರು: "ಮರುನ್ಮಾಲಾ, . . . ಕೋಟವರ್ಷಾ, ಲಂಕೋಯಿಕಾ, ಲಂಕಾಸಿಕಾ – ೧೦ ಸ್ಪೃಕ್ಕವೆಂಬ ಗ್ರಂಥ್ಯದ್ರವ್ಯ; ಸಂಕೇಬೇರು" (ಸಿದ್ಧಾಂತಿ. ೧೨೫).
[ಸಂ. ಕೋಟವರ್ಷಾ]

**ಕೋಟಿಶ** (ನಾ). (ಹೊಲಗದ್ದೆಗಳಲ್ಲಿ ಹೆಂಟೆಗಳನ್ನು ಒಡೆಯುವ) ಮರದ ಕೊಡತಿ; ಹಲಬೆ: "ಕೋಟಿ[ಪಾಠಾಂ. ಟೀ]ಶಂ, ಲೋಷ್ಟ ಭೇದನಂ – ಈ ೨ ಹಲಿಕೆ" (ಹಲಾಯು. ೯೪–೪೨೨); "ಹರಿಕೆ ಕೋಟಿಶ ಮುಕ್ಕು ಲೋಷ್ಟಭೇದಂ" (ಮಂಗರಾ. ೧೦೯–೧). [ಸಂ.]

**ಕೋಟಿಹೊರಿಸು** (ಕ್ರಿ). ಅಪಾದನೆಯನ್ನು ಹೇರು, —ಹೊರಿಸು: ರಾಜನ ಮೇಲೆ ಅವನ ಸ್ನೇಹಿತರು ಕೋಟಿಹೊರಿಸುವುದಕ್ಕೆ ಮೊದಲಾಯಿತು (ನಟಸಾ. ೩೧). [ಕೋಟಿ₁ + ಹೊರಿಸು (< ಪೊರಿಸು)]

**ಕೋಟೀರ** (ನಾ). ೧. ಕಿರೀಟ; ಮಕುಟ: "ಕಿರೀಟಂ, ಉಷ್ಣೀಷಂ, ಕೋಟೀರಂ, ಮುಕುಟಂ – ಈ ೪ ಮಕುಟಂ" (ಹಲಾಯು. ೯೩–೪೧೧); ಶ್ರೀರಮಣಂ ಪುಟ್ಟಿರೆ ಕೋಟೀರಾದ್ಯಾಭರಣ ಚಕ್ರಮುಖ್ಯಾಯುಧ ನಾನಾರಶ್ಮಿಯನು ವಿಜೃಂಭಿಸೆ ರಾರಾಜಿಸಿದತ್ತು ಕೌಸ್ತುಭಂ ಪೇರುರದೊಳ್ (ಜಗವಿ. ೩–೧); ತೇರು ಗಮಿಸುವ ವೇಗಕರಸನ ಚಾರುರತ್ನಸ್ಫುರಿತ ಶಿರಕೋಟೀರ ಕೆಡೆದುದು (ಅಂಬಿಕಾ. ೪೮–೩೧). ೨. ಜಡೆ; ಮುಡಿ: ಸೋಮಕೋಟೀರಭಾರನಂ . . . ತ್ರಿಣೇತ್ರನಂ (ಭಕ್ತಾಚ. ೩–೫೯); ಜಯಜಯ ಸುಧಾಕರ ಕಲಾಕಲಿತ ಕೋಟೀರ (ರಾಜಶೇ. ೧೪–೧೬೯ ವ).
[ಸಂ.]

**ಕೋಟೀಶ₁** (ನಾ). = ಕೋಟಿಶ: "ಕೋಟೀ[ಪಾಠಾಂ. ಟಿ]ಶಂ, ಲೋಷ್ಟಭೇದನಂ – ೨ ಹಲಿಕೆ" (ಹಲಾಯು. ೯೪–೪೨೨). [ಸಂ.]

**ಕೋಟೀಶ₂** (ನಾ). ಕೋಟ್ಯಧೀಶ: ಅವನೊಬ್ಬ ಕೋಟೀಶ (ರೂಢಿ).
[ಕೋಟಿ₁ + ಈಶ]

**ಕೋಟು₁** (ನಾ). ಮೈಗೆ ತೊಟ್ಟುಕೊಳ್ಳುವ ಒಂದು ಬಗೆಯ ದಪ್ಪವಾದ ಉಡುಪು; ಮೇಲಂಗಿ: ಕೋಟುಗಳೇ ಪ್ರಬಲವಾಗಿ ಮುಂಚಿನ ನಿಲುವಂಗಿಗಳು ಎಲ್ಲಿಯೋ ಅಡಗಿದವು (ತೋಳಮು. ೬೨); ಕಾಲಿಗೆ ಬಿಳಿ ಇಜಾರು; ಉದ್ದವಾದ ಕಪ್ಪುಕೋಟು; ತಲೆಗೊಂದು ಪಾಗೋಟಿ . . . ಧರಿಸಿದ್ದನು (ನಿಷ್ಕಾಮ. ೨). [← ಇಂ. Coat]

**ಕೋಟು₂**, ಕೋಟ್ (ನಾ). ಇಸ್ಪೀಟು ಆಟದಲ್ಲಿ ಒಂದು ಬಗೆ. ೪ ಪಕ್ಷ ಕಟ್ಟಿ ಆಡುವಾಗ ಒಂದು ಪಕ್ಷದವನು ತನ್ನ ಪ್ರತಿಪಕ್ಷದವರೊಡನೆ ಎಲ್ಲಾ ಎಲೆಗಳನ್ನೂ ಗೆಲ್ಲುವುದು: ಅವರಿಗೂ ಮೂಕವಾಗಿ ನಡೆದ ಆಟ 'ಕೋಟು' 'ಒಕ್ಕ್ಯ'ಗಳು ಒಂದರಮೇಲೊಂದು ಒದಗಿದಾಗ ಒಮ್ಮೆಲೇ ಚತುರ್ಮುಖವಾಗಿ, ಷಣ್ಮುಖವಾಗಿ ಕೆಲೆಯ ಹತ್ತಿತು (ಮೂರುದಾ. ೮). **ಕೋಟ್**: ಇವರ ಜೋಡಿದಾರನು 'ಕೋಟ್' ಎಂದು ಒದರಿದಾಗ ವಿರುದ್ಧಪಕ್ಷದವರ ದಿವಾಳಿಯಾಗಿ ಬಿಟ್ಟಿತ್ತು (ಮೂರುದಾ. ೮). [← ಇಂ. Quote]

**ಕೋಟುಗಸ್ತಿ** 'ಕೋಟುಗಸ್ತು' ನೋ.

**ಕೋಟುಗಸ್ತು**, ಕೋಟುಗಸ್ತಿ (ನಾ). ರಾತ್ರಿಯಲ್ಲಿ ವೇಷ ಬದಲಾಯಿಸಿಕೊಂಡು ಗುಟ್ಟಾಗಿ ತಿರುಗಾಡುವುದು; ಗುಪ್ತವಾಗಿ ಸಂಚರಿಸುವುದು; ಪಹರೆ (?): ಆ ಪಟ್ಟಣದ ದೊರೆಯಾದ ವಿರೋಚನನು ರೂಪವನ್ನು ಮರೆಯಿಸಿಕೊಂಡು ಕೋಟುಗಸ್ತಿಗಾಗಿ ಬರುತಾ ಇವನನ್ನು ಕಂಡು – ನೀನು ಯಾರು? . . . ಎಂದನು (ನೀತಿಚಿಂ. V,೩). **ಕೋಟುಗಸ್ತಿ**: ನಿಷ್ಠೆ ರಾತ್ರಿ ಕಳ್ಳರನ್ನು ಹಿಡಿಯುವುದಕ್ಕೆ ಹೋಗಿದ್ದ ಠಾಣೇದ ಗುರಿಕಾರನು ಊರಲ್ಲಿ ಕೋಟುಗಸ್ತು ತಿರುಗುತ್ತಿರುವಾಗ್ಗೆ (ಪೇಟೀಮಾ. ೩೩). [ಕೋಟು ? + ಗಸ್ತು]

**ಕೋಟುರ** (ನಾ). ನೋವು; ಸಂಕಟ (?): ಪೇಳಾರ ಮನಕ್ಕೆ ಕೋಟುರಮನಾಗಿಸದೀ ಭುವನಾಂತರಾಳದೊಳ್ (ಎಇ. XIII, ೩೦೩–೨೫; 1125). [< ಕೋಟರ ?]

**ಕೋಟೆ₁** 'ಕೋಂಟೆ' ನೋ.

**ಕೋಟೆ₂** (ನಾ). ಒಂದು ಸೀಮೆಯ ಹೆಸರು: ಕೋಟೆಯ ನೀತಿಮಾರ್ಗೇಶ್ವರವುಮನಾಳ್ತ ಶ್ರೀಮನ್ನೊಳಂಬದಿ ಚಲ್ಲುಕದೇವ (ಎಕ. IX, ಚನ್ನಪ. ೯೮–೮; 907). [?]

**ಕೋಟೆಕೋಲಾಹಲ** 'ಕೋಂಟೆಕೋಲಾಹಲ' ನೋ.

**ಕೋಟೆಕೋಳಾಹಳ** 'ಕೋಂಟೆಕೋಲಾಹಲ' ನೋ.

**ಕೋಟೆಗಲ್ಲು** (ನಾ). ಕೋಟೆಯ ಗೋಡೆಯ ಕಲ್ಲು; ಪ್ರಾಕಾರದ ಶಿಲೆ: ಮಂಟಪಂ ಬಿರಿದಿರಿದು ಬಯಲಾಯ್ತು ಬಾಗಿ ಬಿದ್ದುವು ಕೋಟೆಗಲ್ಲುಗಳ್ (ಬಸವ. ೧೩–೫).
[ಕೋಟೆ₁ (< ಕೋಂಟೆ) + ಕಲ್ಲು (< ಕಲ್₃)]

**ಕೋಟೆಗಾ** (ಕ್ರಿ). ಕೋಟೆಯನ್ನು ರಕ್ಷಿಸು, —ಕಾಪಾಡು: ಎತ್ತಿದ ಪಂಜುಗಳುರಿವೆಳಗೆತ್ತಂ ಮಿಸುಗುವಿನಮೆಳ್ಳಜೆಳ್ಳಜೆನುತ್ತಂ ಬಿತ್ತರದಿನಾರ್ದು ತಿರುಗುತೆ ಸುತ್ತಂ ಸಲೆ ಕೋಟೆಗಾದನಚಳಿತ ಧೀರಂ (ವೃಷವಿ. ೧೯–೧೨). [ಕೋಟೆ₁ (< ಕೋಂಟೆ) + ಕಾ₁]

**ಕೋಟೆಗಾಜಿ** 'ಕೋಂಟೆಗಾಜಿ' ನೋ.

**ಕೋಟೆಗಾವಲ್** 'ಕೋಂಟೆಗಾವಲ್' ನೋ.

**ಕೋಟೆಗಾಳಗ** 'ಕೋಂಟೆಗಾಳಗ' ನೋ.

**ಕೋಟೆಗಾಳೆಗ** 'ಕೋಂಟೆಗಾಳೆಗ' ನೋ.

**ಕೋಟೆತೆನೆ** 'ಕೋಟೆದೆನೆ' ನೋ.

**ಕೋಟೆದೆನೆ**, ಕೋಟೆತೆನೆ (ನಾ). ಕೋಟೆಯ ಅಗ್ರಭಾಗದಲ್ಲಿರುವ ಬುಗುರಿಯ ಆಕಾರದ ಕಂಡಿಯುಳ್ಳ ರಚನೆ,—ಶಿಲ್ಪ: ಬಿಡದೆ ಸಾವಿರ ಸಂಖ್ಯೆಯೂ ನಿಚ್ಚಣಿಗೆಯ ಹೂಡಿಸಿ ತೆಂಕಣ ಕೋಟೆದೆನೆಗೆ (ಕಂಸವಿ. ೧೪–೪೧) ಮುಗಿಲುಮುಟ್ಟಿದ ಕೋಟೆದೆನೆಗಳಿಂ ಕೊನೆಗಳಿಂದಗಳು ಜಲಮುತಳಮಂ ಭೇದಿಪುದು (ರುಕ್ಮಾಂಗ. ೩–೪). **ಕೋಟೆತೆನೆ**: ಗಗನವ ಸೋಂಕುವ ಕೋಟೆಕೊತ್ತಲುಗಳು ಬುಗುರಿ ಮಾಟದ ಕೋಟೆತೆನೆಯು (ಸೌಗಂಪ. ೧–೬); (ಕಟ್ಟಡಕ್ಕೆ, ಗೋಡೆಗೆ) ಕಂಡಿಗಳುಳ್ಳ ಕೈಪಿಡಿಗೋಡೆ ಹಾಕು, ಕಟ್ಟು; ಕೋಟೆತೆನೆಮಾಡು, ಕಟ್ಟು (Embattle. ಇಂಕನ್ನ). [ಕೋಟೆ₁ (< ಕೋಂಟೆ) + ತೆನೆ₁]

**ಕೋಟೆಮನೆ** (ನಾ). ಕೋಟೆಯಿಂದ ಸುತ್ತುವರಿಯಲ್ಪಟ್ಟ ಮನೆ: ಹಿಂದೆ ದುರ್ಗವಾಗಿದ್ದ ಶ್ರೀಮಂತಗೃಹ, ಕೋಟೆಮನೆ (Castle. ಇಂಕನ್ನ). [ಕೋಟೆ₁ (< ಕೋಂಟೆ) + ಮನೆ]

**ಕೋಟೆಮಾನ್ಯ** (ನಾ). ಕೋಟೆಯ ರಕ್ಷಣೆಗಾಗಿ ಕೊಟ್ಟ ಮಾನ್ಯ, —ಭೂಮಿ: ಬಯಿರಗೊಂಡಗೆ ಕೋಟೆಮಾನ್ಯದ ಗದೆ (ಮೈಆರಿ. ೧೯೩೦, ೯೮–೩; 17ನೆಯ ಶತ). [ಕೋಟೆ₁ (< ಕೋಂಟೆ) + ಮಾನ್ಯ]

**ಕೋಟೆಮುಗಿಲು** (ನಾ). ಕೋಟೆಯ ಆಕಾರದಲ್ಲಿ ಸುತ್ತುಗಟ್ಟಿದ ಮೋಡ: ಕೋಟೆಮುಗಿಲು, ಕೆಮ್ಮೋಡ, ಬಿಳಿಮೋಡ, ಕಾರ್ಮೋಡ, ಹಿಂಡುಮೋಡ ಇವಿದ್ದು ಬಿಟ್ಟಹುಳ ನೆಲ ಕಚ್ಚದೆ ಹಾರಾಡಿದರೆ ಮಳೆ ತಪ್ಪೋಲಿ, ಕುರ್ತೇಟು ಬಂತು (ಹುಟ್ಟಿಹ. ೧೪೩).
[ಕೋಟೆ₁ (< ಕೋಂಟೆ) + ಮುಗಿಲು (< ಮುಗಿಲ್)]

**ಕೋಟೆಯಮ್ಮ** (ನಾ). ಒಬ್ಬಾತನ ಹೆಸರು: ಉತ್ತರಾಯಣ ಸಂಕ್ರಾನ್ತಿಯನ್ದು ಕೋಟಿಗರ ಕೋಟೆಯಮ್ಮಂ ಗೋಸಹಸ್ರಮಾಟ್ದಂ (ಮೈಆರಿ. ೧೯೨೯, ೬೮–೧೨; 964).
[ಕೋಟೆ₁ (< ಕೋಂಟೆ) + ಅಮ್ಮ₁]

**ಕೋಟೆವಳಿ** (ನಾ). ಕೋಟೆಯ ಹತ್ತಿರದ ನೆಲ; ದುರ್ಗದ ಪ್ರದೇಶ: ಜಟ್ಟಿಗರ ವೀರರಸಮಂ ನೆಟ್ಟನೆ ತೂಗಲ್ಕೆ ದಿಟ್ಟದೊಲೆಯಿಂದದಟರ್ ಕಟ್ಟಿದ ಕಟ್ಟಳೆಯೆನಿಸಿದುದಿಟ್ಟಳಮೆನೆ ಕೋಟೆವಳಿಯ ಸೆಳಿಗೆಯ್ದಾಟಿಗಳ್ (ಪಾರ್ಶ್ವಪು. ೩–೧೩೨). [ಕೋಟೆ$_1$ (< ಕೋಂಟೆ) + ಬಳಿ$_2$]

**ಕೋಟೆವಿರಿ** (ನಾ). ಕೋಟೆಯ ಬಿರುಕು, —ಸೀಳು : ನಾಡ ಕೊಳ್ಳಿಗೆ ಹಂದು ತಲೆ ಹೋಗಾಡಿದಂತವನಲ್ಲ ಮೇಹಿಂಗಾಡ ಬಂದಿಲಿ ಕೋಟೆವಿರಿ [ಪಾಠಾಂ. ಕೋಟನಿಜ]ಯಲಿ ಸಿಕ್ಕಿ ಮಡಿವಂತೆ (ಬಸವು. ೫೮–೪೪).
[ಕೋಟೆ$_1$(< ಕೋಂಟೆ) + ಬಿರಿ$_2$]

**ಕೋಟೇಶ್ವರ** (ನಾ). (ಕರಾ) ೧. ಒಂದು ಊರಿನ ಹೆಸರು. ೨. ಬ್ರಾಹ್ಮಣರ ಒಂದು ಪಂಗಡ; ಆ ಪಂಗಡಕ್ಕೆ ಸೇರಿದವನು : ಕೋಟೇಶ್ವರ ಬ್ರಾಹ್ಮಣರು, ಕುಂದಾಪುರ ತಾಲ್ಲೂಕಿನ ಕೋಟೇಶ್ವರವೆಂಬ ಗ್ರಾಮದಲ್ಲಿ ವಾಸಿಸುವರು (ತುಳುನಾ. ೧೪೫). [ಕೋಟೆ$_1$+ ಈಶ್ವರ]

**ಕೋಟ್ಟೆ** 'ಕೋಂಟೆ' ನೋ.

**ಕೋಟ್ಟವಳ** 'ಕೊತವಾಲ' ನೋ.

**ಕೋಟ್ವಾರಿ** 'ಕೊಟ್ವಾರಿ' ನೋ.

**ಕೋಟ್ಟೆ** 'ಕೋಂಟೆ' ನೋ.

**ಕೋಟ್ಟೆಐ** (ನಾ). ಒಬ್ಬಾತನ ಹೆಸರು: ಕೋಟ್ಟಮುಂ ಮನೆತ್ತಾನಮುಂ ಚನ್ದ್ರಸೇನಾಚಾರ್ಯರ್ಗೆ ಉದಪೂರ್ವಂ ಕೊಟ್ಟಾರ್ ಅದರ್ಕೆ ಸಾಕ್ಷಿ ಕೋಟ್ಟಜರುಂ ಕಾರೆಅಜುಳುಂ (ಮೈಆರಿ. ೧೯೨೫, ೧೦೬–೩೬ ; ?). [?]

**ಕೋಟ್ಯಂತರ** (ಗು). ಕೋಟಿಗಟ್ಟಲೆಯ; ಲೆಕ್ಕವಿಲ್ಲದ; ಅಸಂಖ್ಯವಾದ : ಹಿಡಿಮಂದಿಯ ಭೋಗ ವೈಭವಗಳ ರಕ್ಷಣೆಗಾಗಿ ಕೋಟ್ಯಂತರ ಜನರ ರಕ್ತಶೋಷಣೆ ದುಃಖಸಂಕಟಗಳನ್ನು ಜಾಗರೂಕತೆಯಿಂದ ಬಚ್ಚಿಡುತ್ತಿದ್ದ (ಪುನರು. ೩೨೭). [ಕೋಟಿ$_1$ + ಅಂತರ]

**ಕೋಠ** 'ಕೊಟ್ಟ$_8$' ನೋ.

**ಕೋಠಾರ** 'ಕೊಟ್ಟಾರ$_1$' ನೋ.

**ಕೋಠಿ$_1$** (ನಾ). ಪ್ರಶ್ನೆ; ಸವಾಲು : ಗಾನರಸಕ್ಕೆ ಮಾತ್ರವೇ ಈ ಸಂಬಂಧವನ್ನು ಹೇಳುವುದಕ್ಕೆ ಕಾರಣವೇನು ? ಎಂದು ಕೋಠಿಮಾಡಿದರೆ, ಉತ್ತರವನ್ನು ಚೆನ್ನಾಗಿ ಯೋಚಿಸಿ ತಿಳಿದುಕೊಳ್ಳಬೇಕಾಗಿದೆ (ಕಾಂಪೂಜ. ೧೨); ಆದರ ಮೇಲೆ ನೀನು ಇನ್ನಾವ ಕೋಠಿ ಹಾಕುತ್ತೀಯೆ? ಎಂದು ಕೇಳಿದನು (ಕೊನಷ್ಟ. ೧೨೨) ; ದರ್ಭೆಗೇನು ನಮ್ಮ ಮನೆಯಲ್ಲಿ ಬರ ಬಂದಿದೆಯೇನೆ ? ಒಂದು ಹಸು ಮೇಯುವಷ್ಟು ಇದೆಯಲ್ಲಾ . . . ಎಂದು ವೆಂಕಮ್ಮ ಅದಕ್ಕೂ ಒಂದು ಕೋಠಿಹಾಕಿ ಮಾತಿಗೆ ಮಾತು ಜೋಡಿಸುತ್ತಿದ್ದರು (ರಾಗಿಣಿ. ೩). [< ಸಂ. ಕೋಟಿ]

**ಕೋಠಿ$_2$** 'ಕ್ಸೋಟ್ಟ$_2$' ನೋ.

**ಕೋಠೀಖೋಲಿ** 'ಕೋಟಿಖೋಲಿ' ನೋ.

**ಕೋಡ$_1$** 'ಕೋಡಗ' ನೋ.

**ಕೋಡ$_2$** (ನಾ). ಕಾಡುಹಂದಿ ; ಸೂಕರ : "ಮಿಗೆಯೊಕ್ಕಲ ಕೋಡ" (ಕವಿಕಂ. ೬೧); ಕೊ[ಕೋ]ಡ ಕೂರಂಗಿ ಮರಿ ಹುಲ್ಲೆ (ಶ್ರೀಪಾಲ. ೭–೧೬).
[< ಸಂ. ಕ್ರೋಡ]

**ಕೋಡ$_3$** (ನಾ). ಕೊಂಕು; ಬಾಗು ; ವಕ್ರ. 'ಕೋಡಮೆ' ಪರಾ. [?]

**ಕೋಡಂಗಿ, ಕೋಡಗಿ, ಕೋಡಿಂಗ, ಕೋಡಿಗ** (ನಾ). ೧. ಯಕ್ಷಗಾನ, ಬಯಲಾಟ, ನಾಟಕ ಮತ್ತು ಸರ್ಕಸ್ಸುಗಳಲ್ಲಿ ವಿಕೃತ ವೇಷವನ್ನು ಧರಿಸಿ ಅಭಿನಯಿಸುವ ಹಾಸ್ಯಪಾತ್ರ; ವಿದೂಷಕ; ಹಾಸ್ಯಗಾರ; ನಕಲಿ: ಹಳೆಯವನು ಬಿದ್ದ ಹೊಸಹೊಸಬ ಗೆದ್ದ, ಕೋಡಂಗಿ ನಡುವೆ ಎದ್ದ. ನವೋಸವದ ಬಯಲಾಟ ಭಾರಿ ತಾಂಡವವೆರಾಷ್ಟ್ರದುದ್ದ (ಅರಳು. ೪೨೬); ಕೋಡಂಗಿ ಆಗಲೇ ತೆರೆಯಾಚೆ ಬಂದನಯ್ಯ (ಚಂಡೆಮ. ೨೨–೪); ದೇವರಿಗೆತ್ತಿದ ಆರತಿಯೊಂದಿಗೇನೆ ಕೋಡಂಗಿಯರು ಭಾಗವತರೊಡನೆ ಸ್ತುತಿಪಾಠ ಮಾಡುತ್ತ ರಂಗಸ್ಥಳವನ್ನು ಸೇರಬೇಕು (ಯಕ್ಷಬ. ೪೧) ; ಸರ್ಕಸ್ಸಿನಲ್ಲಿ ಅಂಗಚಲನೆಯ ಚಮತ್ಕಾರ ಸಾಮರ್ಥ್ಯವನ್ನು ತೋರುವ ಕಲಾವಿದನನ್ನು ಅನುಕರಿಸಿ ಮೂರು ಉರುಳಾಗುವ ಕೋಡಂಗಿಯಂತೆ (ಬಂಕಿಮ. ೩೫೦). ೨. ಅವಿವೇಕಿ; ಮೂರ್ಖ: ಕೊಟ್ಟೋನು ಕೋಡಂಗಿ ಇಸ್ಕೊಂಡೋನು ಈರಭದ್ರ (ಗಾದೆ). ೩. ಕುರೂಪಿ: ಈ ಕೋಡಂಗಿಯನ್ನು ಎಲ್ಲಿಂದ ಹುಡುಕಿ ತಂದರೋ . . . ಚಂದ್ರಭಾಗಿಗೆ ತೋಭಿಸುವ ಹುಡುಗನೇ ಅಲ್ಲ (ಮೂರುದಾ. ೬೫). **ಕೋಡಗಿ** : ೧. ಆ ಕೋಡಗಿ ಕಾಡ ಕೂಡಿ ಕುರವಿಯಾಗಿರ್ದುದು (ಪುಣ್ಯಾಸ್ರ. ೪–೫೩ವ). **ಕೋಡಿಂಗ** : ೨. 'ಕೊಟ್ಟವನು ಕೋಡಿಂಗ, ತೆಗೆದುಕೊಂಡವನು ವೀರಭದ್ರ' ಎಂಬ ಗಾದೆಯಂತೆ (ಕಾನೂರು. ೪೧೨). **ಕೋಡಿಗ** : ೧. ಬೊಂಬೆಗಳಾಟಗಳಲ್ಲಲ್ಲಿ ಪಾತ್ರ ನಿತಂಬಿನಿಜನಗಳಲ್ಲಲ್ಲಿ ಡೊಂಬರಗಳೆಯ ಸಂಗಡಿಗರು ಕೋಡಿಗರಿಂಬುಗೊಂಡಿರ್ದರಲ್ಲಲ್ಲಿ (ಭರಚ.೨೦–೩೫). ೨. ಪುಸ್ತಕವ ಹಿಡಿದುಕೊಂಡು ಪುರಜನವ ಮೆಚ್ಚಿಸುವ ಕೋಡಿಗರಂತೆ (ಘನವ. ೩೪–೭) ; ರಾಮನಾಥಾರ್ಯಗಳ್ಕಾಳ್ಪ ಕೋಡಿಗರ ವಿದ್ಯೆಯುಂ ಜೋಡಿಸಿದನೆನಲ್ (ಎಕೋಪು. ೯–೩೩) ; ಗೊಲ್ಲರ ಗೊರವರ ಗೋಪತಿಗಳ ಬಲುಮಲ್ಲರ ಮಾಸಾಳುಗಳ ಕೊಲ್ಲಟಿಗರ ಕೋಡಿಗರ ಕೇರಿಗಳು ಲೆಕ್ಕವಿಲ್ಲದೆಸೆವವದಱೊಳಗೆ (ರಾಮವಿ. ೩–೪೧) ; ಕೋಡಿಗನೋ ಏಡಾಯುಗನೋ ಕೋವಿದ ಮುಗ್ಧರದೇವನೊ (ಹಮ್ಮೀರ. ೬–೫೦).

**ಕೋಡಂಗಿಯಾಟ** = ಹಾಸ್ಯಗಾರನ ಅಭಿನಯ ; ಕೋತಿಯಾಟ; ವಕ್ರಚೇಷ್ಟೆ: ಕೋಡಂಗಿಯಾಟವನಾಡಿದ ಭಕ್ತಂಗೆ ಬೇಡಿತ್ತನೀವ ನಮ್ಮ ಕೂಡಲಸಂಗಮದೇವ (ಬಸವ. ೧೭೯).

[ದೇ. ॥ ತಮಿ. ಕೋಣಙ್ಗಿ ; ಮಲ. ಕೋಡಙ್ಗಿ ; ತುಳು. ಕೊಡಂಗ್ಯ ; ತೆಲು. ಕೋಣಂಗಿ, ಕೋಡಿಗ]

**ಕೋಡಂಗಿತನ** (ನಾ). ನಕಲಿ ; ಕಪಿಚೇಷ್ಟೆ ; ಹಾಸ್ಯ : (ಚ).
[ಕೋಡಂಗಿ + – ತನ]

**ಕೋಡಂಗುರಿ** (ನಾ).(?) : ಮರಿ ಹಂದಿ ಹುಲ್ಲೆ ಹುಲಿ ಕಡವೆರಳೆಯುಮಾ ದೆಕ್ಕು ತೋಳನೆಯ್ ಸಾರಂಗಂ ಕರಡಿ ಮೊಲಂ ಕೋಡಂಗುರಿ ನರಿ ದರಿ ಕೂರಂಗಿ ಬೆಕ್ಕು ಹೇರುಡು ಕಾಕಂ (ಸೂಕ್ತಿಸು. ೩–೧೪೯). ಟಿ. ಇದು ಕೊಂಡಗುಱಿ ಎಂಬುದರ ಅಪಲಿಖಿತವಿರಬಹುದು.

**ಕೋಡಂಬವಳಿ** (ನಾ). ಒಂದು ಊರಿನ ಹೆಸರು (?) : ಆತ್ರ ಸಿರಿಸಿದಯನ ಬರಹ ಯುಕ್ಕೆ ನಿಂಮ ಕೋಡಂಬವಳಿಯಿಂದ ಪೊಕ್ಕಲು ಬಂದು (ಎಕ. XIV, ಮಳವ. ೧೪೫–೪೯ ; ?). [?]

**ಕೋಡಂಬೆ** (ನಾ). (?) : ಪಡಹದ ಪಿಳುಕುಟಿಯ ಕೊಳಂಬೆಯ ಕೂಕಂಬದ ಕೋಡಂಬೆಯ ಮುಡಿಗೆಯ ತಾಣಂಗಳೊಳ್ ಮೇದು ಮೆಯ್ವೆರ್ಚೆ . . ಕೊಟಕಿಟ್ಟಾಡುವ ಮೃಗಂಗಳೊಳ್ (ಅನಂಪು. ೧೧–೩೯ವ). [?]

**ಕೋಡಕಯ್** 'ಕೋಡಕೆಯ್' ನೋ.

**ಕೋಡಕೆಯ್, ಕೊಡಕ್ಕೈ, ಕೋಡಕಯ್, ಕೋಡಕ್ಕೈ,** (ನಾ). ಒಂದು ಬಗೆಯ ಆಯುಧ (?): ಅಳವನಱಿಯದೆ ಕೆಣಕಿ ತಹ ಮುಂಕೊಳಿಸಿ ಕದನವ ಕೋಡಕೆಯ್ಯ[ಪಾಠಾಂ. ಕೈಯ] ವರಳವಿಗೊಟ್ಟರೆ ನೋಡಿ ಸಿಡಿಮಿಡಿಗೊಂಡು (ಕುವ್ಯಾಭೀ. ೪–೬೫). **ಕೊಡಕ್ಕೈ** : ಕೊಂದನು ಕೊಡಕ್ಕೈಯೊಳು ಬಂದೆಸುವ ಬಿಲ್ಲ ಮಂದಿಯ ಮುಂದೆ ಸಂದಣಿಸಿ (ಕುರಾಸಾಂ. ೪೪–೧೨೦).

